# ಮಾಂಗ್ಣಿ ಮಾಸ್ಟ್ರಂಗೆ ನಮಸ್ಕಾರ




ಡಾ॥ ಸಬಿತಾ ಮರಕಿಣಿ

# ಮಾಂಗ್ಣಿ ಮಾಸ್ತ್ರಂಗೆ ನಮಸ್ಕಾರ

(ಹವಿಗನ್ನಡ ಕತೆಗಳು)

ಡಾ॥ ಸಬಿತಾ ಮರಕಿಣಿ

ಪ್ರಕಾಶಕರು

ವಾಸವಿ ಪಬ್ಲಿಕೇಷನ್

238, 1ನೇ ಮಹಡಿ, 2ನೇ ಮುಖ್ಯರಸ್ತೆ, 9ನೇ ಕ್ರಾಸ್,

ಮಾರುತಿನಗರ, ಯಲಹಂಕ, ಬೆಂಗಳೂರು–64

"MANGNI MASTRANGE NAMASKAR" Collection of Havigannada stories by : Dr. Sabitha Marakini

PUBLISHED BY- Vasavi Publication, No.238, 1st floor, 2nd Main, 9th Cross, Maruti Nagar, Yelahanka, Bangalore-64

First impression : 2013
Page : 102
Price : Rs. 70.00
70 GSM N.S. Maplitho - 1/8 Demy

ಮಾಂಗ್ನಿ ಮಾಸ್ತ್ರಂಗೆ ನಮಸ್ಕಾರ
ಲೇಖಕರು : ಡಾ॥ ಸಬಿತಾ ಮರಕಿಣಿ
ಪ್ರಥಮ ಮುದ್ರಣ : 2013
ಪುಟ ಸಂಖ್ಯೆ : 102
ಬೆಲೆ : 70.00

ಮುಖಪುಟ : ಹರೀಶ ಕುಮಾರ

ಮುದ್ರಣ : ಶ್ರೀರಾಮ ಪ್ರಿಂಟರ್ಸ್
ವಿ.ವಿ.ರಸ್ತೆ, ಮಂಡ್ಯ

# ಪರಿವಿಡಿ

# ಅಬ್ಬೆ: ಮಣ್ಣಿಲಿ ಮಣ್ಣಾಗಿ

"ಈಗ ಎಲ್ಲಾ ಮುಗುದತ್ತಲ್ಲದೊ ಅಬ್ಬೆ.. ಇನ್ನು ಮುಂದಾಣದ್ದರ ಆಲೋಚನೆ ಮಾಡೇಡದೋ?"

"ಮುಗುದ್ದು ಎಂತದು ಮಗಾ?"

"ಅಲ್ಲಾ ಕುಞಿಯ ಬೊಜ್ಜ ಶಪುಂಡಿ ಎಲ್ಲಾ ಕಳುದತ್ತನೇ ಹೇಳಿ ಹೇಳಿದ್ದು ಆನು. ಇಷ್ಟರವರೆಗೆ ಕುಞಿ ನಿನ್ನ ಒಟ್ಟಿಂಗೆ ಇತ್ತಿದ್ದ. ಇನ್ನು ಅವನೂ ಇಲ್ಲೆ. ಹಾಂಗಾಗಿ ಕೇಳಿದ್ದು ನೀನೆಂತ ಮಾಡುತ್ತೆ? ಇಲ್ಲಿ ಒಬ್ಬನೇ ಇದ್ದು ಅಸಬಡಿವದಕ್ಕೆ ಎನ್ನೊಟ್ಟಿಂಗೆ ಪುತ್ತೂರಿಂಗೆ ಬಪ್ಪ ಆಲೋಚನೆ ಮಾಡುತ್ತೀಯೋ ಹೇಂಗೆ ಹೇಳಿ ಕೇಳಿದ್ದು."

"ಅನು ನಿನ್ನೊಟ್ಟಿಂಗೆ ಪುತ್ತೂರಿಂಗೆ ಬಪ್ಪ ಪ್ರಶ್ನೆಯೇ ಇಲ್ಲೆ. ಕುಞಿ ಮಾಂತ್ರ ಸತ್ತದ್ದು. ಅವನೆಟ್ಟ ಬಾಳೆ ಗೆಡುಗೊ, ಕೆಲವು ಬಾಳೆಸೆಸಿಲಿ ಮೋತೆ ಬಪ್ಪಲೆ ಸುರುವಾಯಿದು. ಅಡಕ್ಕೆ ಸೆಸಿಲಿ ಸಿಂಗಾರ ಒಡದ್ದು. ಅನು ಅದರೆಲ್ಲಾ ಬಿಟ್ಟಿಕ್ಕಿ ಬತ್ತನೋ? ಸಾವನ್ನಾರ ಆನು ಈ ಹೆರಿಯರ ಮಣ್ಣು ಬಿಟ್ಟಿಕ್ಕಿ ಎಲ್ಲಿಗೂ ಹೋವುತ್ತಿಲ್ಲೆ. ಈ ಮನೆ ಹೊಸ್ತಿಲು ಹೊಕ್ಕು ಐವತ್ತು ವರ್ಷ ಕಳುತ್ತು".

"ಅದೆಲ್ಲಾ ಅಪ್ಪಬ್ಬೆ, ನಿನ್ನ ಒಬ್ಬನನ್ನೆ ಇಲ್ಲಿ ಬಿಟ್ಟು ಆನು ಹೇಂಗೆ ಸುಖಲ್ಲಿ ಬದುಕ್ಕೆಕು ಹೇಳು? ನೋಡಿದವರಾರೂ ಎಂತ ಹೇಳುಗು? ವಯಸ್ಸಾದ ಅಬ್ಬೆಯ ಬಿಟ್ಟಿಕ್ಕಿ ಮಗ ಹೋಯಿದ' ಹೇಳಿ ಹೇಳವೋ? ಈ ಇಳಿವಯಸ್ಸಿಲ್ಲಿಯೂ ಅಬ್ಬೆಯ ನೋಡಿದ್ದಾ ಇಲ್ಲೆ ಹೇಳಿ ಎನ್ನ ಮೇಗೆ ಅಪವಾದ ಹೋರಸವೊ ಜೆನಂಗೊ? ಅದಾದರೂ ರಜಾ ಆಲೋಚನೆ ಮಾಡು ನಿನಗೆ ನಿನ್ನದೇ ಹಠ ಅಬ್ಬೆ" ಮಗ ಕೇಶವಂಗೆ ರಜಾ ಕೋಪ ಬಂತು.

"ಜೆನಂಗೊ ಹೇಳುತ್ತವು ಹೇಳಿ ನಾವು ಕೊಣಿವಲೆ ಅವುತ್ತೊ? ಬೇಡಂಗಟ್ಟೆ ಹೇಳುವವರ ಬಾಯಿ ನವಗೆ ಮುಚ್ಚುಸಲೆಡಿಗೊ? ಹೇಳಿ ಹೇಳಿ ಬಾಯಿ ಬಚ್ಚುವಾಗ ತಾನೇ ನಿಲ್ಲುಸುಗು. ಅದರೆಲ್ಲಾ ಗಣ್ಯ ಮಾಡ್ಯೊಂಡು ನಾವು ಬದುಕ್ಕಲಾಗ. ನವಗೆ ಯಾವುದು ಸರಿ ಹೇಳಿ ಕಾಣುತ್ತೋ ಅದರ ನಾವು ಮಾಡೇಕು" ಹೇಳಿತ್ತು ಅಬ್ಬೆ.

"ಹೇಳಿರೆ ನೀನೀಗ ಮಾಡುದು ಸರಿ ಹೇಳಿಯೋ ನಿನ್ನ ಅಭಿಪ್ರಾಯ? ಮಗ, ಸೊಸೆ, ಪುಳ್ಯಕ್ಕೊ ಎಲ್ಲಾ ಇದ್ದೂ-ಆರೂ ಇಲ್ಲದ್ದ ಅನಾಥೆ ಹಾಂಗೆ ಇಲ್ಲಿಯೇ ಇರೇಕು. ಹೇಳಿಯೋ ನಿನ್ನ ಹಠ?"

"ಆರಿದ್ದರೂ ಸಾವಾಗ ಎನ್ನೊಟ್ಟಿಂಗೆ ಆರೂ ಬತ್ತವಿಲ್ಲೆ, ಆನು ಹುಟ್ಟಿದ್ದೂ ಒಂಟಿಯಾಗಿ, ಸಾವದೂ ಒಂಟಿಯಾಗಿಯೇ ಹಾಂಗಾಗಿ ಈ ಮಣ್ಣು ನೆಲವ ಬಿಟ್ಟಿಕ್ಕಿ ಆನೆಲ್ಲಿಗೂ ಬತ್ತಿಲ್ಲೆ. ಈ ಮಣ್ಣಿಲ್ಲಿಯೇ ಮಣ್ಣಾಗಿ ಹೋವುತ್ತೆ?" ಅಬ್ಬೆ ಅದರ ನಿರ್ಧಾರವ ಹೇಳಿತ್ತು.

"ಇಷ್ಟೆಲ್ಲಾ ಕಷ್ಟ ತಿಂದೂ ನಿನಗಿನ್ನೂ ಬುದ್ದಿಬಯಿಂಲ್ಲೆ ಅಬ್ಬೆ. ಸಣ್ಣ ವಯಸ್ಸಿಲ್ಲೇ ಅಪ್ಪ ತೀರಿ ಹೋದವು. ಅಂಬಾಗ ನಿನಗೆ ಬರೇ ಮೂವತ್ತು ವರ್ಷ ಪ್ರಾಯ ಎನಗೆ ಹನ್ನೆರಡು ವರ್ಷ, ಕುಞಿಗೆ 8 ವರ್ಷ. ಅಲ್ಲಿಂದಿತ್ತೆ ನೀನು ಬಂದ ಬಜವ ಹೇಳ್ಳೆ ಎಡಿತ್ತಿಲ್ಲೆ. ಆದರೂ ಕಷ್ಟಪಟ್ಟು ಎನಗೆ ನಾಲ್ಕು ಅಕ್ಷರ ಕಲುಶಿ, ಹೈಸ್ಕೂಲಿನ ಮಾಷ್ಟ್ರ ಮಾಡಿದೆ. ಕುಞಿಗೆ ವಿದ್ಯೆ ತಲಗೆ ಹತ್ತದ್ದ ಕಾರಣ, ಅವನ ಏಳನೇ ಕ್ಲಾಸಿಂಗೇ ಶಾಲೆ ಬಿಡುಸಿದೆ ಇರಳಿ. 'ತೋಟ, ಮನೆ ನೋಡ್ಳಾದರೂ ಒಬ್ಬ ಬೇಡದೋ? ಇಬ್ರೂ ಕಲ್ತು ಹೆರ ಹೋದರೆ, ಈ ಮಣ್ಣಿನ ಗತಿ ಎಂತದು? ಎನ್ನೊಟ್ಟಿಂಗೂ ಒಬ್ಬ ಇರೇಡದೋ' ಹೇಳಿ ಕಾನೂನು ಮಾತಾಡಿದೆ. ಹಾಂಗೇ ಅವನ ತೋಟ ನೋಡ್ಲೂ ಹಟ್ಟಿ, ಗೊಬ್ಬರ ತಯಾರು ಮಾಡ್ಲೂ ಮನೇಲಿಯೇ ಮಡಿಕ್ಕೊಂಡೆ"

"ಎನಗೆ ಬೇಕಾಗಿ ಆನು ಅವನ ಮನೇಲಿ ಕೂರ್ಸಿದ್ದಲ್ಲ ಅವಂಗೆ ಎಷ್ಟು ಹೇಳಿದರೂ ತಲಗೆ ವಿದ್ಯೆ ಹತ್ತಿದ್ದಿಲ್ಲೆ. ಅವಂಗೆ ಕಲುಶುವ ಮಾಷ್ಟ್ರಕ್ಕಳೂ ಮನೆ ಹತ್ರ ಬಂದು 'ಸಾಂತಕ್ಕ ಮದಲಾಣ ಮಾಣಿಯ ಹಾಂಗೆ ನಿನ್ನ ಎರಡ್ನೇ ಮಗಂಗೆ ಎಷ್ಟು ಹೇಳಿದರೂ ವಿದ್ಯೆ ತಲಗೆ ಹತ್ತುತ್ತಿಲ್ಲೆ. ಸುಮ್ಮನೇ ಶಾಲಗೆ ಎಂತಕೆ ಕಳುಸುತ್ತೆ? ಬಾಕಿದ್ದಲ್ಲೆಲ್ಲಾ ಉಷಾರಿದ್ದ. ಒಳ್ಳೆ ಗುಣ ನಡತೆ ಇದ್ದು. ಹೆರಿಯೋರು ಹೇಳಿರೆ ಪ್ರೀತಿ ಗೌರವ ಇದ್ದು. ಅವನ ತೋಟದ ಕೆಲಸಕ್ಕೆ ಹಚ್ಚು. ಉಷಾರಕ್ಕು' ಹೇಳಿ ಹೇಳಿಕ್ಕಿ ಹೋದವು. ಹಂಗಾಗಿ ಅವನ ಶಾಲೆ ಬಿಡುಶಿದೆ. ನಿನ್ನ ತಲಗೆ ವಿದ್ಯೆ ಹತ್ತಿತ್ತು. ನಿನ್ನ ಕಲಿವಲೆ ಕಳುಸಿದ್ದೆ. ಇದರಲ್ಲಿ ಎನ್ನ ತಪ್ಪು ಎಂತದಿದ್ದು ಮಗಾ? ವಿದ್ಯೆ ಎಲ್ಲೋರಿಂಗೂ ಹತ್ತ. ಹತ್ತಿದವರ ಬಿಡ. ದಡ ಮುಟ್ಟಿಸಿಯೇ ಬಿಡುಗು. ಅವಕ್ಕೆ ಅಶನಕ್ಕೆ ದಾರಿಯನ್ನೂ ತೋರ್ಸುಗು" ಹೇಳಿತ್ತು ಅಬ್ಬೆ.

"ಹಾಂಗೋ ನೀನೆ ಅವಂಗೆ ಕಲುಶದ್ದೆ ಮನೇಲಿ ಕೂರ್ಸಿದ್ದು ಹೇಳಿತ್ತು ಎನ್ನ ತಲೇಲಿ" ಹೇಳಿದ ಕೇಶವ.

"ಅವ ಕಲಿಯದಿದ್ದರೆ ಎಂತಾತು? ಮನೆ ತೋಟವ ಹೇಂಗೆ ನೋಡ್ಯಂಡ ಹೇಳು. ಚಿನ್ನದ ಕರಡಿಗೆ ಮಾಡಿದ್ದ. ಮೂರು ಖಂಡಿ ಅಡಕ್ಕೆ ಬಪ್ಪ ತೋಟಲ್ಲಿ 6 ಖಂಡಿ ಬಪ್ಪ ಹಾಂಗೆ ಮಾಡಿದ, ಮೂರು ಕೊನೆ ಬಾಳೆ ಕಾಯಿ ಬಪ್ಪಲ್ಲಿ ಮೂವತ್ತು ಕೊನೆ ಬಪ್ಪ ಹಾಂಗಾತು. ಮನೆ ಕರ್ಚ ಕಳುದು ವರ್ಷಕ್ಕೆ ನೂರು ತೆಂಗಿನ ಕಾಯಿ ಮಾರ್ಲೆ ಸಿಕ್ಕಿತ್ತು. ಅದರೊಟ್ಟಿಂಗೆ, ಪರಂಗಿ, ಚಿಕ್ಕೆ, ಪೇರಳೆ, ದಾಳಿಂಬೆ, ಕಾಳು ಮೆಣಸನ್ನೂ ಬೆಳಶ್ಯೊಂಡ. ಊರಿನವೆಲ್ಲಾ ಕುಞಿಯ ಹೊಗಳ್ಳೆ ಸುರು ಮಾಡಿದ್ದವು. ಅವೆಲ್ಲಾ ಅವರ ಜಮೀನಿಂಗೂ ಅವನ ಕರಕ್ಕೊಂಡು ಹೋಗಿ ಮಾಹಿತಿ ಪಡವಲೆ ಸುರು ಮಾಡಿದವು"

"ಕಿರು ಬೆರಳು ಬೀಗಿದರೆ ಎಷ್ಟು ಬೀಗ್ಗು ಹೇಳಿ ಎನಗೆ ಗೊಂತಿಲ್ಲಿಯೋ? ಈ ಮೂರುಗೇಣು ಭೂಮಿಲಿ ಎಷ್ಟು ಉತ್ಪನ್ನ ಬಕ್ಕು ಹೇಳಿ ಎನಗೆ ಗೊಂತಾಗದೋ? ಒಂದಕ್ಕೆರಡು ಕರ್ಚಿ ಮಾಡಿದರೆ ಸಿಕ್ಕಿದ ಬೆಳಗೆ ಬೆಲೆ ಇದ್ದೊ? ಕುಞಿ ಇಪ್ಪಾಗ ಅದು ಬೇರೆ ಮಾತು. ಈಗ ಅವನೂ ಇಲ್ಲೆನ್ನೆ. ನಿನ್ನ ಒಬ್ಬನ ಬಿಟ್ಟಿಕ್ಕಿ ಹೋಪಲೆ ಎನಗೆ ಕಾಲೇ ಬತ್ತಿಲ್ಲೆ. ಕೆಲಸ ಬಿಟ್ಟಿಕ್ಕಿ ಇಲ್ಲಿ ಇಪ್ಪಲೆ ಎನ್ನಂದ ಸಾಧ್ಯವೂ ಇಲ್ಲೆ"

"ಹೇಳಿರೆ ನಿನ್ನ ಮಾತಿನ ಅರ್ಥ ಎಂತದು ಹೇಳಿ ಬಿಡುಸಿ ಹೇಳು ಮಾಣಿ. ಸುತ್ತು ಸುಳುದು ಹೇಳೇಡ"

"ಅಷ್ಟೂ ಅರ್ಥ ಆಗದ್ದ ಜಾತಿ ನೀನಲ್ಲ ಹೇಳಿ ಎನಗೆ ಗೊಂತಿದ್ದು ಅಬ್ಬೆ. ನೀನು ಎನ್ನ ಬಾಯಿಂದಲೇ ಮಾತು ಉದುರುಸೇಕ್ಕು ಹೇಳಿ ನೋಡುತ್ತೆ ಅಷ್ಟೆ.

"ಅಪ್ಪು ನೀನೇ ಬಿಡುಸಿ ಹೇಳು"

" ಈ ಮೂರು ಮಳ ಆಸ್ತಿಯ ಮಡಿಕ್ಕೊಂಡು ಎಂತ ಮಾಡ್ಳೆ ಇದ್ದಬ್ಬೆ? ಆರಿಂಗೆ ಹೇಳಿ ಕಾದು ಮಡಿಕ್ಕೊಳೇಕು ಇದರ? ಕುಞ ಇದ್ದಿದ್ದರೆ ಅವಂಗಾದರೂ ಅಕ್ಕು ಹೇಳ್ಳೆ ಅವುತಿತ್ತು. ಅವನೂ ಕಣ್ಣು ಮುಚ್ಚಿದ. ಇನ್ನಿದರ ಮಡಿಕ್ಕೊಂಡ್ರೆ ಯಾವ ಪುರುಷಾರ್ಥ ಇದ್ದು ಹೇಳು".

"ಅದಕ್ಕೆ?"

"ಇದರ ಆರಾದರೂ ತೆಕ್ಕೊಂಬೋರು ಇದ್ದರೆ ಮಾರುವೊ, ಸಿಕ್ಕಿದ ಪೈಸೆಯ ಬೇಂಕಿಲ್ಲಿಮಡುಗುವೊ. ನೀನು ಎನ್ನ ಒಟ್ಟಿಂಗೆ ಪುತ್ತೂರಿಂಗೆ ಬಾ. ಇದರಿಂದ ಎನಗೂ ತಲೆಬೆಶಿ ಕಮ್ಮಿ ಅಕ್ಕು. ನಿನಗೂ, ಮಗ, ಪುಳ್ಳಕ್ಕಳೊಟ್ಟಿಂಗೆ ಸುಖವಾಗಿ ಇಪ್ಪಲಕ್ಕು. ಇದರನ್ನೇ ಆನು ನಿನಗೆ ಹೇಳೇಕು ಹೇಳಿ ಗ್ರೇಶಿದ್ದು"

"ಇಷ್ಟು ಅರ್ಥ ಎನಗೆ ನಿನ್ನ ಪೀಠಿಕೇಂದ ಆಗಳೇ ಅರ್ಥ ಆಯಿದು. ಅದು ಅಪ್ಪೋ ಅಲ್ಲದೋ ಹೇಳಿ ನಿನ್ನ ಬಾಯಿಂದಲೇ ಕೇಳುವೊ ಹೇಳಿ ಕೇಳಿದ್ದು ಆನು"

"ಅಂಬಾಗ ನೀನೆಂತ ಹೇಳುತ್ತೆ ಅಬ್ಬೆ. ಎಂತ ಆಲೋಚನೆ ಮಾಡುತ್ತೆ?" ಕುತೂಹಲ ಇತ್ತು ಕೇಶವನ ಮಾತಿನಲ್ಲಿ.

"ಆನು ಸಾವನ್ನಾರ ಈ ಜಮೀನಿನ ಮಾರಲೂ ಇಲ್ಲೆ. ಆನು ನಿನ್ನ ಒಟ್ಟಿಂಗೆ ಬತ್ತೂ ಇಲ್ಲೆ"

"ನಿನಗೆ ನಿನ್ನದೇ ಛಲ ಅಬ್ಬೆ. ಅಪ್ಪ ಸತ್ತರೂ ನೀನು ಜಗ್ಗಿದ್ದಿಲ್ಲೆ. ವಯಸ್ಸಿಂಗೆ ಬಂದ ಮಗ ಸತ್ತರೂ ನಿನ್ನ ಸೊಕ್ಕು ಕಮ್ಮಿ ಆಯಿದಿಲ್ಲೆ. 'ಇಲ್ಲೇ ಬಿದ್ದು ಸಾಯ' ಹೇಳಿ ನಿನ್ನ ಹಣೆಲಿ ದೇವರು ಬರದ್ದರ ಅಳುಶಲೆ ಹುಟ್ಟಿಸಿದ ಬ್ರಹ್ಮನಿಂದಲೂ ಸಾಧ್ಯ ಇಲ್ಲೆ" ಕೇಶವನಿಗೆ ಸಿಟ್ಟು ತಲೆಗೇರಿತು.

"ಅದಷ್ಟೇ ಮಾಣಿ ಹಣೇಲಿ ಬರದ್ದರ ಅಳುಶಲೆ ಆರಿಂದಲೂ ಸಾಧ್ಯ ಇಲ್ಲೆ. ಅವರವರ ಆಯುಶ್ಯ ಮುಗಿವಾಗ, ಅವವು ಹೋವುತ್ತವು. ನಾಳಂಗೆ ನಾವೂ

ಹೋಪವೇ ಅಲ್ಲದೋ? ಬದುಕಿದಷ್ಟು ದಿನ ಚೆಂದಲ್ಲಿ ಬದುಕುದಷ್ಟೇ ನಮ್ಮ ಕೈಲಿಪ್ಪದು." ಸಾಂತಕ್ಕ ಸಮಾಧಾನದಲ್ಲಿಯೇ ಉತ್ತರಿಸಿದರು.

ಕೇಶವನಿಗೆ ಏನು ಹೇಳಬೇಕೆಂದೇ ತೋಚಲಿಲ್ಲ ಹೇಗಾದರೂ ಮಾಡಿ ಅಮ್ಮನನ್ನು ಒಪ್ಪಿಸಿ, ಇರುವ ಆಸ್ತಿಯನ್ನು ಮಾರಿಯೇ ಹೋಗಬೇಕು ಎಂದು ರಜೆ ಹಾಕಿ ಬಂದವನು. ಆ ಕುರಿತು ಪಕ್ಕದ ಮನೆಯ ನರಸಿಂಮನ ಹತ್ತಿರ ಮಾತುಕತೆಯನ್ನೂ ಮುಗಿಸಿಯಾಗಿತ್ತು. ತನ್ನ ಜಮೀನಿಗೆ ಒತ್ತ ಇರುವ ಸಾತಕ್ಕನ ಜಮೀನು ದೊರೆತರೆ ಒಳ್ಳೆದು ಎಂದು ಆಸೆ ಪಟ್ಟವನು ನರಸಿಂಮ. ಹೇಗೋ ಕುಞ (ಗೋವಿಂದ) ಮರಣಿಸಿದ್ದು ಕೇಳಿ ಸಂತೋಷಪಟ್ಟವನೂ ಅವನೊಬ್ಬನೇ. ಇನ್ನು ಸಾತಕ್ಕ ಇಲ್ಲಿರಲಿಕ್ಕಿಲ್ಲ ಕೇಶವನೊಟ್ಟಿಗೆ ಹೋಗಲೇ ಬೇಕು ಎಂಬ ಲೆಕ್ಕಾಚಾರದಲ್ಲಿದ್ದವನು. ಜಮೀನು ಚೆನ್ನಾಗಿದ್ದುದರಿಂದ ಒಳ್ಳೆ ಬೆಲೆಯನ್ನೇ ಕೊಡುತ್ತೇನೆಂದಿದ್ದ. ಇದರಿಂದ ಕೇಶವನಿಗೂ ಸಂತೋಷವಾಗಿತ್ತು. ಇನ್ನು ಬೆರಳೆಣಿಕೆಯ ದಿನದೊಳಗೆ ಭೂಮಿಯನ್ನು ಮಾರಿಯೇ ಊರಿಗೆ ತೆರಳುವುದೆಂದು ನಿಶ್ಚಯಿಸಿದ್ದ. ಆದರೆ ಸಾತಕ್ಕ ಅದಕ್ಕೆ ಅಡ್ಡಗಾಲು ಹಾಕಬಹುದು ಎಂದು ಅವನು ಭಾವಿಸಿರಲಿಲ್ಲ.

"ನಿನಗೆ ಬುದ್ಧಿ ಹೇಳುದು ಯಾವ ಮೂಲಗೂ ಇಲ್ಲೆ ಅಬ್ಬೆ! ಇಂಥಾ ಪರಿಸ್ಥಿತಿಲೂ ನೀನು ನಿನ್ನ ಸೊಕ್ಕು ಬಿಟ್ಟದ್ದಿಲ್ಲೆ. ಹೇಳುದರ ಕೇಳು. ಮತ್ತೆ ನಿನ್ನ ಛಲವ ಸಾಧುಸು" ಸ್ವಲ್ಪ ಗರಂ ಆಗಿಯೇ ಹೇಳಿದ ಕೇಶವ. "ಆನು ನೀನು ಹೇಳಿದ್ದರ ಕೇಳುತ್ತೂ ಇಲ್ಲೆ. ಈ ಭೂಮಿ ಬಿಟ್ಟು ನಿನ್ನ ಹಿಂದೆ ಬತ್ತೂ ಇಲ್ಲೆ."

"ಎಂತ ಬೇಕಾದರೂ ಮಾಡಿಗೋ. ಆನು ನಾಳಂಗೆ ಎದ್ದಿಕ್ಕಿ ಹೋವುತ್ತೆ. ನೀನು ಇಲ್ಲಿಯೇ ಬಿದ್ದು ಸಾಯಿ. ನಿನಗೆಂತಾದರೂ ಹೆಚ್ಚು ಕಮ್ಮಿ ಆದರೆ ಇಲ್ಲಿ ನೋಡ್ಳೆ ಆರಿದ್ದವು? ಅದಾದರೂ ಆಲೋಚನೆ ಮಾಡು? ನಿನಗೆ ಎಡಿಯದ್ದೆ ಆದರೆ ಘಟಕ್ಕನೆ ಎದ್ದಿಕ್ಕಿ ಬಪ್ಪಲೆ ಎನ್ನಂದ ಎಡಿಗೋ, ಎನಗಿಪ್ಪದು ಸರಕ್ಕಾರದ ಕೆಲಸ. ವರ್ಷಕ್ಕೆ ಇಂತಿಷ್ಟೇ ರಜೆ ಹೇಳಿ ಲೆಕ್ಕ ಇರ್ತು. ಕೂಡ್ಲೆ ಹೆರಟಿಕ್ಕಿ ಬಪ್ಪಲೆ ಇದೆಂತ ಹತ್ರಾಣ ದಾರಿಯೋ ಎಲ್ಲಾ ಆಲೋಚನೆ ಮಾಡಿಗೋ" ಕೇಶವ ಬರುತ್ತಿರುವ ಸಿಟ್ಟನ್ನು ನುಂಗಿ, ತಾಯಿಗೆ ವಿವರಣೆ ಕೊಟ್ಟ.

"ಆನು ಆಲೋಚನೆ ಮಾಡಿಯೇ ಹೇಳಿದ್ದು ಮಗಾ. ಆನು ಈ ಜಮೀನಿನ ಮಾರುತ್ತೂ ಇಲ್ಲೆ ನಿನ್ನ ಒಟ್ಟಿಂಗೆ ಬತ್ತೂ ಇಲ್ಲೆ!' ನಿರ್ಧಾರ ವಿತ್ತು ಸಾತಕ್ಕನ ಸ್ವರದಲ್ಲಿ.

"ನಿನಗೆ ಎಡಿಯದ್ದೆ ಆದರೆ ನೋಡುದು ಆರು ನಿನ್ನ?"

"ಮದಲೊಂದು ಸರ್ತಿ ಎನಗೆ ಎಡಿಯದ್ದಿಪ್ಪಗ ನೀನೋ ಎನ್ನ ನೋಡಿದವ" ಸಾವಲೆಸೆದಳು ಸಾತಕ್ಕ.

"ಅದು ಎಂದು. ಇಂದಿಂಗೆ ಹತ್ತು ವರ್ಷದ ಹಿಂದಾಣ ವಿಷಯ. ಅಂಬಾಗ ಎನಗೆ ಮೂವತ್ತೈದು ವರ್ಷ ತುಂಬಿತ್ತಿಲ್ಲೆ" ನೆನಪಾಯಿತು ಕೇಶವನಿಗೆ. "ಈಗಾಣ ಪರಿಸ್ಥಿತಿ ಹಾಂಗಲ್ಲ. ಎನಗೂ ಬದುಕ್ಕಿಲ್ಲಿ ಬೇಕಾದಷ್ಟು ಅನುಭವ ಆಯಿದು. ಅಬ್ಬೆ ಅಪ್ಪನ ಸರಿಯಾಗಿ ನೋಡೆಕಾದ್ದು ಮಕ್ಕಳ ಕರ್ತವ್ಯ ಹೇಳುದರ ಅರಿವು ಬಯಿಂದು"

"ಬೆಲ್ಲಲ್ಲಿ ಕಡೆ ಕೊಡಿ ಹೇಳಿ ಬೇಧ ಇರುತ್ತಿಲ್ಲೆ – ಎಲ್ಲಾ ಕಡೆಯೂ ಸೀವೇ ಇರುತ್ತು ಹಾಂಗೇ ಹಾಗಿಲಕಾಯಿ, ಎಲ್ಲಿಕಚ್ಚಿದರೂ ಕಯಿಕ್ಕೆಯೇ ಇಪ್ಪದು. ವ್ಯತ್ಯಾಸ ಅವುತ್ತಿಲ್ಲೆ"

"ಹೇಳಿರೆ ಆನು ಹಾಗಿಲಕಾಯಿಗೆ ಸಮ ಹೇಳಿಯೋ ನಿನ್ನ ಮಾತಿನ ಅರ್ಥ." ಕೇಳಿದ ಕೇಶವ.

"ಅಪ್ಪ, ನಿನಗೆ ಅಷ್ಟು ಅರ್ಥ ಆದರೆ ಸಾಕು. ನೀನೆಂದೂ ನಿನ್ನ ಗುಣ ಬಿಟ್ಟವ ಅಲ್ಲ. ಅಪ್ಪ ಸಾಯುವಾಗಲೂ ನಿನಗೆ ದುಃಖ ಆಯಿದಿಲ್ಲೆ. ಬೊಜ್ಜಕ್ಕೆ ಶುಕ್ರುಂಡೆ ರಜಾ ಹೆಚ್ಚು ಮಾಡ್ಸು ಅಬ್ಬೆ. ಎನಗೆ ಅಂಬಾಗಂಬಾಗ ತಿಂಬಲಾವುತ್ತು ಹೇಳಿದ ಮಾಣಿ ನೀನು ಕುಞಿ ಹಾಂಗಲ್ಲ. ಅಪ್ಪ ಸತ್ತವನೇ ಹೇಳಿ ದುಃಖಿಸಿದ ಮಾಣಿ "ನೀನು ಕೂಗೇಡಬ್ಬೆ. ಆನು ನಿನ್ನ ನೋಡ್ಯಂಬೆ' ಹೇಳಿದವ; ಹಾಂಗೇ ಎನ್ನ ಕೂದಲು ಕೊಂಕದ್ದ ಹಾಂಗೆ ಇಂದಿನವರೆಗೂ ನೋಡ್ಯಂಡು ಬಂದವ" ಸಾತಕ್ಕ ವಿವರಣೆ ಕೊಟ್ಟಳು.

"ಅಂಬಾಗ ಆನು ಸಣ್ಣವ ಅಲ್ಲದೋ ಅಬ್ಬೆ? ಎನಗಾದ್ದು ಬರೇ ಹನ್ನೆರಡು ವರ್ಷ ಅಲ್ಲದೋ?"

"ನಿನ್ನ ತಮ್ಮ ಕುಞಿಗೆ ಆದ್ದು ಎಂಟೇ ವರ್ಷ ನೆಂಪು ಮಾಡಿಗೋ."

"ಹಾಂಗಾರೆ ನೀನು ಇಲ್ಲಿಂದ ತಳ ಕಿತ್ತುವ ಅಂದಾಜಿಲೇ ಇಲ್ಲೆ. ಆನೇ ಈ ಆಸ್ತಿಯ ಮಾರಿ, ನಿನ್ನ ನೆಗ್ಯೊಂಡು ಹೋಪ ವ್ಯವಸ್ಥೆ ಮಾಡೇಕಷ್ಟೆ!" ಕೇಶವ ತನ್ನ ಇಂಗಿತವನ್ನು ಬಯಲು ಮಾಡಿದ.

"ನೀನು ಆಸ್ತಿಯ ಮಾರ್ಲೆ ರಜಾ ಪುರುಸೊತ್ತು ಇದ್ದು. ಇದು ನಿನ್ನ ಪಿತ್ರಾರ್ಜಿತ ಆಸ್ತಿ ಅಲ್ಲ. ಆನೂ ಅಪ್ಪನೂ ಕಷ್ಟಪಟ್ಟು ದುಡುದು ಗಳುಸಿದ ಭೂಮಿ.

ಅಪ್ಪ ಸಾಯಕಾರ ಮದಲೇ ಆಸ್ತಿಯ ಹಕ್ಕಿನ ಎನ್ನ ಹೆಸರಿಂಗೆ ಬರದು ಮಡುಗಿಕ್ಕಿಯೇ ಸತ್ತಿದವು. ಆನಿದರ ಆರ ಹೆಸರಿಂಗೂ ಬರವಲಕ್ಕು ಕೂಡ್ಲೂ ಅಕ್ಕು. ನಿನಗೇ ಕೊಡೇಕು ಹೇಳುವ ಕಾನೂನು ಇಲ್ಲೆ ಆತೊ". ಸಾತಕ್ಕ ಹೇಳಿದ್ದನ್ನು ಕೇಳಿ ಕೇಶವ ದಂಗಾಗಿ ಹೋದ. ಅವನ ಸಿಟ್ಟು ತಾನೇ ಇಳಿಯಿತು. ಹೇಗಾದರೂ ಮಾಡಿ ಅಮ್ಮನನ್ನು ಒಪ್ಪಿಸಬೇಕು ಎಂಬ ಯೋಚನೆ ಬಂತು.

"ಆನು ಸುಮ್ಮನೇ ಹೇಳಿದ್ದು ಅಬ್ಬೆ. ಎಷ್ಟಾದರೂ ಆನು ನೀನು ಹೆತ್ತ ಮಗ. ಎಂತದೋ ಹೇಳಿದೆ ಹೇಳಿ ಬೇಜಾರ ಮಾಡೇಡ. ಎನ್ನ ಕ್ಷಮಿಸಿಕ್ಕು. ಎನಗೆ ನಿನ್ನ ಒಬ್ಬನನ್ನೇ ಇಲ್ಲಿ ಬಿಟ್ಟಿಕ್ಕಿ ಹೋಪಲೆ ಮನಸ್ಸಿಲ್ಲೆ. ನೀನೂ ಎಂಗಳೊಟ್ಟಿಂಗೆ ಇದ್ದು ಸುಖಲ್ಲಿ ಇರೇಕು ಹೇಳುವ ಆಶೆ ಎನ್ನದು. ಎನ್ನ ಒಟ್ಟಿಂಗೇ ಬತ್ತಿಕ್ಕು ಅಬ್ಬೆ. ನಿನ್ನ ಕಾಲು ಹಿಡುದು ಬೇಡ್ಯೋಳ್ತೆ ಬತ್ತಿಲ್ಲೆ ಹೇಳಿ ಮಾಂತ್ರ ಹೇಳೇಡ" ಕೇಶವ ಸಾತಕ್ಕನ ಕಾಲು ಹಿಡುಕ್ಕೊಂಡ.

"ನಿನ್ನ ಈ ಮಸಳೆ ಕಣ್ಣೀರಿಂಗೆಲ್ಲಾ ಕರಗುವ ಅಬ್ಬೆ ಇದಲ್ಲ ಹೇಳಿ ನೆಂಪು ಮಡಿಕ್ಕೊ. ನೀನು ಮಾಡಿದ್ದರ, ಹೇಳಿದ್ದರ ಪ್ರತಿಯೊಂದನ್ನೂ ನಿನಗೆ ಆನು ಜ್ಞಾಪಿಸಿಕೊಡೇಕೋ? ಅಂಬಾಗ ಎಲ್ಲಿಗೆ ಹೋಗಿತ್ತು ನಿನ್ನ ಈ ವಿನಯ ಬುದ್ಧಿ?"

"ಆನೆಂತ ಮಾಡಿದ್ದೆ ಅಬ್ಬೆ ನಿನಗೆ? ಇಷ್ಟು ನಿಷ್ಟುರಲ್ಲಿ ಎನ್ನ ಶಿಕ್ಷಿಸಲೆ. ಅದಾದರೂ ಹೇಳು"

"ನೀನು ಹೇಳಿದ್ದು, ಮಾಡಿದ್ದು, ಮಾಡ್ಸಿದ್ದು ಒಂದೆರಡೋ? ಎಲ್ಲಾ ನೆಂಪು ಮಾಡು"

"ಎನಗೊಂದು ನೆಂಪಾವುತ್ತಿಲ್ಲೆ. ಎಲ್ಲಾ ನೀನೇ ಹೇಳು" ಹೇಳಿದ ಕೇಶವ

"ನಿನ್ನ ನೋಡಿದ ಕೂಡ್ಲೆ ಎನಗೆ ಪ್ರತಿಯೊಂದು ನೆಂಪಾವುತ್ತು ಮಗಾ. ಅದರ ಜಾನ್ಸುವಾಗ ನಿನ್ನ ಮುಸುಡೇ ನೋಡ್ಲಾಗ ಹೇಳಿ ಕಾಣುತ್ತು. ನೀನು ಇಲ್ಲಿಗೆ ಒಂದಾರಿ ಬಂದಗಿ ಹೋದರೆ ಎನಗಾದ ಬೇನೆ ಹಸಿ ಹುಣ್ಣಿನ ಹಾಂಗೆ ಕೆದರುತ್ತು", ಸಾಂತಕ್ಕನ ಕಣ್ಣಿನಲ್ಲಿ ನೀರು ಹನಿಯಲು ತೊಡಗಿತು.

"ನೀನೆನಗೆ ಮಾಡಿದ್ದು ಒಂದೋ ಎರಡೋ? ಎಲ್ಲಾ ಹೇಳೇಕಾರೆ ಮೂರು ದಿನವೂ ಸಾಲ" ಸಾಂತಕ್ಕ ಮುಂದುವರಿಸಿದರು.

"ನಿನಗೆ ಹೆಂಡತಿ ಬಂದ ಮೇಲೆ ಅಪ್ಪ ಅಬ್ಬೆ ಹೇಳ್ವವು ಇತ್ತಿದ್ದವು ಹೇಳುವ ಅರಿವೂ ಹೋಯಿದು. ನಿನ್ನ ಹೆತ್ತು ಹೊತ್ತು ಸಾಂಕಿ ಸಲಹಿ ದೊಡ್ಡದು ಮಾಡಿದವು

ಹೇಳುವ ಜ್ಞಾನವೇ ನಿನಗಿತ್ತಿಲ್ಲೆ. ಪ್ರತಿಯೊಂದಕ್ಕೂ ಹೆಂಡತಿಯ ಮಾತು ಕೇಳ್ಯೋಂಡು ಕೋಲೆ ಬಸವನ ಹಾಂಗೆ ಮೆರೆದೆ, ಇಲ್ಲಸಲ್ಲದ ಅಪವಾದವ ಹೆಂಡತಿ ಹೇಳಿದರೂ ಅದುವೇ ಸತ್ಯ ಹೇಳಿ ಎನ್ನ ಬಾಯಿಗೆ ಬಂದ ಹಾಂಗೆ ಜರವಲೆ ಸುರು ಮಾಡಿದೆ. ಆನು ಕೂದರೂ ತಪ್ಪು ನಿಂದರೂ ತಪ್ಪು ಹೇಳುವಲ್ಲಿವರೆಗೆ ಎನ್ನ ದಂಡುಸಿದೆ. ಇಪ್ಪತ್ತೈದು ವರ್ಷ ಕಷ್ಟಪಟ್ಟು ಸಾಂಕಿದ ಅಬ್ಬೆಂದ ನಿನಗೆ ಬಂದು ಇಪ್ಪತ್ತು ದಿನ ಆದ ಹೆಂಡತಿಯೇ ದೊಡ್ಡದಾಗಿ ಕಂಡತ್ತು ಅದು ಹೇಳಿದ್ದೆಲ್ಲಾ ನಿಜ ಹೇಳಿ ನಂಬಿಗೊಂಡು ಬಂದೆ"

"ಅದು ಹಾಂಗಲ್ಲ ಅಬ್ಬೆ. ಅಬ್ಬೆ ಅಪ್ಪನ ಬಿಟ್ಟು ಬಂದ ಅದಕ್ಕೆ ಆನಲ್ಲದೆ ಬೇರಾರು ಅಸರಿದ್ದವು ಹೇಳು? ನಿತ್ಯ ಅದು ಕಣ್ಣೀರಿಲ್ಲಿ ಕೈ ತೊಳವಾಗ ಎನಗೆ ಸಂಕಟ ಆಗ್ಯೊಂಡು ಇದ್ದದ್ದು ನಿಜ. ಅದಕ್ಕೆ ನೀನದರ ದಂಡುಸೇಡ ಹೇಳಿದ್ದು ಆನು"

"ಆನು ಮನೆಗೆ ಬಂದ ಕೂಸಿನ ದಂಡುಸುವೆ ಹೇಳಿ ನೀನು ನಂಬಿದ್ದಾರೂ ಹೇಂಗೆ? ಹುಟ್ಟಿ ಇಪ್ಪತ್ತೈದಾದರೆ ನಿನಗೆ ಹೆತ್ತಬ್ಬೆಯ ಗುಣ ಅರ್ಥ ಆಯಿದಿಲ್ಲೆ ಹೇಳಿರೆ ಇನ್ನಾರ ಅರ್ಥ ಮಾಡ್ಯೊಂಬೆ ನೀನು? ಒಂದೆರಡು ಸರ್ತಿ ಚುಗುಲಿ ಹೇಳುವಾಗಲೆ ಎನ್ನಬ್ಬೆ ಹಾಂಗೆಲ್ಲಾ ಮಾಡ ಹೇಳಿ. ಅದರ ಬಾಯಿ ಮುಚ್ಚಿಸಿದ್ದರೆ ಅದು ಅಷ್ಟು ಬೆಳವಲೆ ಕಾರಣ ಇತ್ತಿಲ್ಲೆ. ಹೇಳಿದ ಹಾಂಗೆ ಕೇಳ್ಯೊಂಡು ಇರ್ತಿತ್ತು. ನೀನು ಅದರ ಮಾತಿನ ಪ್ರತಿಯೊಂದನ್ನೂ ನಂಬಿ ಎನ್ನ ಜರವಲೆ ಸುರು ಮಾಡಿದೆ. ಅದಕ್ಕೂ ಸಲಿಗೆ ಸಿಕ್ಕಿತ್ತು. ಇಲ್ಲಸಲ್ಲದ್ದರ ಸೇರಿಸಿ ನಿನ್ನ ಕೆಮಿ ತುಂಬುಸಿತ್ತು. ನಿನ್ನದು ಒಟ್ಟೆ ಕೆಮಿ ಹೇಳಿ ಅದಕ್ಕೆ ಸಂಪೂರ್ಣ ಅರ್ಥ ಆತು. 'ಇವನ ಬೇಕಾದ ಹಾಂಗೆ ಕೊಣೆಶಲಕ್ಕು ಹೇಳಿ ಅದಕ್ಕೆ ಗೊಂತಾತು; ಹಾಂಗಾಗಿ ನಿಂಗೊ ಇಲ್ಲಿ ಇಪ್ಪನ್ನಾರವೂ ಎನಗೆ ಕುಚ್ಚಣಿ ತಪ್ಪಿದ್ದಿಲ್ಲೆ; ಎದ್ದಿಕ್ಕಿ ಎಲ್ಯಾದರೂ ಹೋಪೆ ಹೇಳಿರೆ ಎನಗೆ ಬೇರೆಲ್ಲಿಯೂ ದಿಕ್ಕಿತ್ತಿಲ್ಲೆ. ಹಾಂಗಾಗಿ ಆನು ಎಲ್ಲವನ್ನೂ ಸಹಿಸೇಕಾಗಿ ಬಂತು. ದಿನಾ ಕಣ್ಣೀರ ಕೂಳೇ ಗತಿ ಆತು. ಇದರೆಲ್ಲಾ ಆನು ಮರವದಾದರೂ ಹೇಂಗೆ?" ಸಾಂತಕ್ಕನ ದುಃಖ ಇನ್ನೂ ಶಮನವಾಗಲಿಲ್ಲ.

"ಅದರೆಲ್ಲಾ ಈಗ ಜಾನ್ಸೇಡ ಅಬ್ಬೆ. ಆದ್ದು ಆಗಿ ಹೋತು. ಇನ್ನು ಹಾಂಗೆಲ್ಲಾ ಆಗ. ಈಗ ಸಾವಿತ್ರಿಗೂ ಬುದ್ಧಿಬಯಿಂದು. "ಅತ್ಯೋರು ಮನೇಲಿ ಇದ್ದರೆ ಎನಗೂ ಒಳ್ಳೆದು ಹೇಳಿ ಆಗಾಗ ಹೇಳುತ್ತು.

"ಅತ್ಯೋರು ಎಂತಕಡಾ? ಅದರ ಬಿಟ್ಟಿ ಚಾಕ್ರಿ ಮಾಡ್ಳೊ? ಇಲ್ಲಿಪ್ಪಾಗ ಒಂದು ಕಡ್ಡಿ ಮುರುದು ನೀರಿಂಗೆ ಹಾಕಿದ್ದಿಲ್ಲೆ? ಉದಿಂದ ಕಸ್ತಲೆ ಆವರಗೂ

ಆನು ದುಡುದರೂ, ಒಂದಿಷ್ಟು ಕೈ ಮುಟ್ಟುಸಿದಿಲ್ಲೆ. ಮೂರು ಹೊತ್ತೂ ಆನು ಅಟ್ಟಿ ಬಳುಸಿದ್ದರ ತಿಂದೊಂಡು ಒಳೆ ಗೂಳಿ ಹಾಂಗೆ ತಿರುಗೇಂಡು ಇತ್ತು ಈಗ ತನ್ನ ಸೊಂಟ ಮುರಿವಾಗ ಅತ್ಯೋರ ನೆಂಪಾತೋ ಅದಕ್ಕೆ" ಸಾಂತಕ್ಕನ ಸವಾಲಿಗೆ ಉತ್ತರವಿರಲಿಲ್ಲ ಕೇಶವನಲ್ಲಿ. ಸುಮ್ಮನೆ ಕುಳಿತಿದ್ದ. "ನಿನಗೆ ಹುಟ್ಟಿದ ಮಕ್ಕಳನ್ನಾದರೂ, ಮೊಟ್ಟೆಲಿ ಮುನುಗಿಸಿ, ಅವರ ಮುದ್ದು ಮಾತುಗಳ ಕೇಳಿಯಾದರೂ ಎನ್ನ ಸಂಕಟ ಮರವೆ ಹೇಳಿ ಜಾನ್ಸಿರೆ ಆ ಮಕ್ಕಳ ಎನ್ನ ಹತ್ರೆ ಬಪ್ಪಲೆ ಬಿಟ್ಟಿದಿಲ್ಲೆ. ಎಲ್ಯಾದರೂ ಆನು ಎತ್ತಿಕೊಂಡರೆ ಪಸಕ್ಕನೆ ಎನ್ನಕ್ಕೆಂದ ಎಳಕ್ಕೊಂಡು ಹೋಕು. ಎಲ್ಯಾದರೂ ತುತ್ತು ಅನ್ನ ಕಲಸಿ ಅವರ ಬಾಯಿಗೆ ಮಡುಗಲೆ ಹೋದರೆ "ಅದಕ್ಕೆ ಆನು ಉಣಿಸುವೆ. ನಿಂಗೊ ಕಾಟಂಗೋಟಿಗಳ ತಿನ್ಸುದು ಬೇಡ' ಹೇಳಿ ಎನ್ನ ಕೈಂದ ಕೂಸಿನ ಎಳಕ್ಕೊಂಡು ಹೋಯ್ಕೊಂಡು ಇತ್ತು ಹೀಗಿಂದ್ದಕ್ಕೆ ಏಕದಂ ಜ್ಞಾನೋದಯ ಆಯಿದು ಹೇಳಿರೆ ಆನು ನಂಬುತ್ತನೋ ಮಗಾ?" ಕೇಶವನಿಗೆ ಏನು ಹೇಳಲೂ ಆಗಲಿಲ್ಲ.

"ಎಂತದೋ ದೇವರು ಕಣ್ಣು ತೆರದ. ನರಕಯಾತನೆಂದ ಎನ್ನ ಪಾರು ಮಾಡಿದ. ನಿನಗೆ ಮನೇಂದ ದೂರಲ್ಲಿ ಕೆಲಸ ಸಿಕ್ಕಿ, ನಿನ್ನ ಪಡಿ ಬಿಡಾರ ಕಟ್ಯೊಂಡು ಹೋದ ಅಂದಿಂದ ಮತ್ತೇ ಆನಿಲ್ಲಿ ನೆಮ್ಮದಿಲಿ ಬದುಕಿದ್ದು"

"ಎಷ್ಟೋ ಸರ್ತಿ ಬಾವಿಗೆ ಹಾರಿ ಆದರೂ ಪ್ರಾಣ ಕಳಕೊಳ್ತೆಹೇಳಿ ಬಾವಿ ಹತ್ರೆ ಹೋದ್ದಿದ್ದು ಆನು. ಆದರೆ ಮರುಗಳಿಗೆಲಿಯೇ ಕುಞಯ ನೆಂಪಾಗಿ ವಾಪಾಸು ಬಂದೆ. ಅದು ಪಶುವಿನ ಹಾಂಗಿದ್ದದು; ಯೇನೂ ಅರಡಿಯದ್ದ ಪಸುಳೆ. 'ಅಬ್ಬೆ ಆನು ಮದುವೆ ಆವುತ್ತಿಲ್ಲೆ. ನಿನ್ನ ಈ ಸ್ಥಿತಿಲಿ ಎನಗೆ ನೋಡ್ಳೆ ಅವುತ್ತಿಲ್ಲೆ. ಒಂದರ ಕೈಲೇ ನೀನು ಬೇಕಾದಷ್ಟು ಹೈರಣ ಆಯಿದೆ. ಇನ್ನೊಂದರ ಮನೆ ಹೊಗುಸಿ, ನಿನ್ನ ಸಂಕಟಕ್ಕೆ ಗುರಿ ಮಾಡುತ್ತಿಲ್ಲೆ' ಹೇಳಿದವ. ಹಾಂಗಾಗಿ ಉಳುದೆ ಆನು."

"ಹಾಂಗೋ, ಅಂಬಾಗ ಅವಂಗೆ ಕೂಸು ಸಿಕ್ಕಿದ್ದಲ್ಲ ಅವ ಮದುವೆ ಆಗದ್ದೇ ಒಳದ್ದು".

"ಅವಂಗೆ ಕೂಸು ಸಿಕ್ಕದ್ದೆಂತ? ಅವ ನಿನ್ನಂದಲೂ ಗಟ್ಟಿಮುಟ್ಟಿನ ಮಾಣಿ. ನೋಡ್ಳೂ ಚೆಂದವ. ಊರಿನಲ್ಲಿ ನಾ ಮುಂದು ತಾಮುಂದು ಹೇಳಿ ಕೂಸಿನ ಕಡೆಯವು ಕೇಳ್ಯೊಂಡು ಇತ್ತಿದ್ದವು".

"ಆರೆಲ್ಲಕೇಳಿದವು?"

"ಕೊಣಮ್ಮೆ ಹರಿಯಪ್ಪ ಮಾವನ ಮಗಳು ಸಾವಿತ್ರಿಯ ಕೇಳಿದವು. ಕಾವೇರಿಕಾನದ ಮಾಬಲಣ್ಣನ ಮಗಳು ಸುಮತಿಯ ಕೇಳಿದ್ದವು. ಎಂತಕೆ ನಿನ್ನ ಸೋದರ ಮಾವನ ಮಗಳು ತಿರುಮಲೇಶ್ವರಿಯ ಕೊಡುತ್ತೆ ಹೇಳಿ ಮಾವ ದುಂಬಾಲು ಬಿದ್ದ. ಎಲ್ಲೊರಿಂಗೂ ಕುಞಿದು ಒಂದೇ ಉತ್ತರ" ಆನು ಈಗ ಸದ್ಯಕ್ಕೆ ಮದುವೆ ಆವುತ್ತಿಲ್ಲೆ. ಮದುವೆ ಅಪ್ಪಾಗ ನಿಂಗೊಗೆ ತಿಳುಶುತ್ತೆ"

"ಮಾವನ ಮಗಳು ತಿರುಮಲೇಶ್ವರಿ ಮೆಟ್ರಿಕ್ ಕಲ್ತಿದಿಲ್ಲಿಯೋ ಕುಞ ಬರೇ ಏಳನೇ ಕ್ಲಾಸು ಮಾಂತ್ರ ಕಲ್ತದಲ್ಲದೋ?

"ಎಂತಾತು. ಅವನ ಜ್ಞಾನ ಮೆಟ್ರಿಕ್ ಕಲ್ತವರಿಂದಲೂ ಹೆಚ್ಚಿದ್ದು. ಅರೆಗಳಿಗೆ ಪುರುಸೊತ್ತು ಸಿಕ್ಕಿದರೂ ಪುಸ್ತಕ ಹಿಡಕ್ಕೊಂಡು ಕೂರುಗು. ಯಾವ ವಿಷಯ ಕೇಳಿದರೂ ಉತ್ತರ ಕೊಡುಗು ಅವನ ತಿಳುವಳಿಕೆ ಕಂಡು ಎಷ್ಟೋ ಜಿನ ದಂಗಾಗಿ ಹೋದವು".

"ನಿನಗೊಟ್ಟಾರೆ ಎನ್ನನ್ನೂ ಎನ್ನ ಹೆಂಡತಿಯನ್ನೂ ಕಂಡರಾಗ. ಅಲ್ಲದೋ? ಒಂದೇ ಒಂದು ಒಳ್ಳೆ ಮಾತು ಎಂಗಳ ವಿಷಯಲ್ಲಿ ಹೇಳಿದ್ದೇಯೋ ನೀನು?"

"ನಿನ್ನಲ್ಲಿ, ನಿನ್ನ ಹೆಂಡತಿಯಲ್ಲಿ, ಒಳ್ಳೆತನ ಹೇಳುದು ದುರ್ಬೀನು ಮಡುಗಿ ಹುಡುಕಿದರೂ ಸಿಕ್ಕ ನಿಂಗಳ ಯಾವ ಗುಣ ಮೆಚ್ಚಿ ಹೊಗಳೇಕು ಆನು?"

"ಹಾಂಗಾರೆ ಎಂಗಳಲ್ಲಿ ಒಂದು ಗುಣವೂ ಇಲ್ಯೋ ಅಬ್ಬೆ"

"ಇಲ್ಲೆ, 'ನೀನು ಕಾಲೆ ಕಲ್ಯೊಣ ನಾರಾಯಣ. ಪಿನ್ನೆ ತೂರಾಯಣ' ಹೇಳುವ ಜಾತಿಯವ; ನಿನ್ನ ಸಾಂಕಿ ದೊಡ್ಡದು ಮಾಡಿ, ನಾಲ್ಕಕ್ಷರ ಕಲುಷುವವರಗೂ ನಿನ್ನಲ್ಲಿ ವಿಧೇಯತೆ ಇತ್ತು. ಆನು ಹೇಳಿದ್ದು ಮಾಡಿದ್ದು ಎಲ್ಲಾ ಸರಿ ಹೇಳಿ ಕಂಡುಗೊಂಡು ಇತ್ತು. 'ಅತಿವಿನಯ ಧೂರ್ತ ಲಕ್ಷಣ' ಹೇಳಿ ಆಗ ಎನಗೆ ಅರ್ತ ಆಯಿದಿಲ್ಲೆ ಇನ್ನು ಮಗ ಕೈಗೆ ಬಂದ. ಅವಂಗೊಂದು ಮದುವೆ ಮಾಡ್ಸಿರೆ–ಮಕ್ಕೊ ಪುಳ್ಳಿಯಕ್ಕಳೊಟ್ಟಿಂಗೆ ಸುಖಲ್ಲಿ ಇಪ್ಪಲಕ್ಕು ಹೇಳುವ ಕಲ್ಪನೆ ಇತ್ತು ಎನಗೆ. ಎನ್ನ ಆಶೆ ಎಲ್ಲಾ ನುಚ್ಚು ನೂರಾತು"

"ಎನ್ನ ಹೆಂಡತಿಯ ನೀನೇ ಹುಡುಕ್ಕಿ ತಂದದಲ್ಲದೋ ಅಬ್ಬೆ. ಅದರೊಟ್ಟಿಂಗೆ ಹೊಂದ್ಯೊಂಬಲೆ ನಿನಗಾಯಿದಿಲ್ಲೆ"

"ಅದರ ಹುಡುಕ್ಕಿ ನಿನಗೆ ಮದುವೆ ಮಾಡ್ಸಿದಪ್ಪು ಅಲ್ಲ ಹೇಳುತ್ತಿಲ್ಲೆ ಆನು.

ಮದುವೆ ಮದಲೆ ಅದರಲ್ಲಿ ಕಂಡ ಗುಣ ನಡತಗೊ, ಮದುವೆ ಕಳುದ ಮತ್ತೆ ಮಂಗಮಾಯ ಆತು; ಒಂದು ದಿನವೂ ಅದು ಎನ್ನ ಗಣ್ಯ ಮಾಡಿದ್ದಿಲ್ಲೆ. ಆನೂ ಕುಞಿಯೂ ಕೂಳಿಂಗೆ ಬಿದ್ದ ನಾಯಿಗಳ ಹಾಂಗೆ ನೋಡ್ಲೆ ಸುರು ಮಾಡಿತ್ತು. "ಒಬ್ಬ ದುಡುದು ಇಷ್ಟು ಜೆನರ ಹೊಟ್ಟೆ ತುಂಬುಸೇಕು ಹೇಳಿರೆ ಕಷ್ಟವೇ" ಹೇಳಿ ಅಂಬಾಗಂಭಾಗ ಹೇಳ್ಳೆ ಸುರು ಮಾಡಿತ್ತು. ರಜಾ ಮನೆ ಕೆಲಸಕ್ಕೆ ಆಸರೆ ಆದರೆ ಕೈ ಎಂತ ತಳೆತ್ತೋ? ಹೇಳಿ ಕೊಂಕು ಮಾತಾಡ್ಳೆ ಸುರು ಮಾಡಿತ್ತು"

"ನೀನು ಅದರೆಲ್ಲಾ ಎನ್ನ ಹತ್ರೆ ಹೇಳಿದ್ದರೆ ಅಂಬಾಗಳೇ ಸರಿ ಮಾಡುತ್ತಿತ್ತೆ. ಏಕೆ ಹೇಳಿದ್ದಿಲ್ಲೆ?

"ನಿನ್ನ ಹತ್ರ ಹೇಳುದಾದರೂ ಹೇಂಗೆ? ನಿನಗೆ ಮದುವೆ ಆದ ಗುಂಗು ಬಿಟ್ಟರಲ್ಲದೊ? ಹೆಂಡತಿ ಹೇಳಿದ್ದು ಎಲ್ಲಾ ಸರಿ, ಆನು ಹೇಳುದು ತಪ್ಪು ಹೇಳಿ ಅರವಲೆ ಸುರುಮಾಡಿದ್ದಿಲ್ಲೆಯೋ ನೀನು. 'ನಸೆ ಕೊಟ್ಟ ನಾಯಿ ಮುಸುಡು ನಕ್ಕುಗು' ಹೇಳುವ ಗಾದೆ ಹಂಗೆ, ಅದಕ್ಕೆ ಸಲಿಗೆ ಸಿಕ್ಕಿತ್ತು. ಮಾತುಗಳ ಬೇಕಾದ ಹಾಂಗೆ ತಿರುಗಿಸಿ, ಎನ್ನ ಮೇಗೆ ತಮ್ಮನ ಮೇಗೆ ಚಾಡಿ ಹೇಳಿ ಸಂತೋಷ ಪಟ್ಟತ್ತು. ಎನಗೆಂತದೂ ಗೊಂತಿಲ್ಲೆ ಗೊಂತಿಪ್ಪದು ತನಗೇ ಹೇಳಿ ವಾದುಸಲೆ ಸುರು ಮಾಡಿತ್ತು. ಅದಕ್ಕೆ ಒಟ್ಟಾರೆ ಎಂಗಳ ಮನೆಂದ ಹೇಂಗಾದರೂ ಹೆರ ಕಳುಸಿ ತಾನು ಸುಖಲ್ಲಿ ಇರೇಕು ಹೇಳಿ ನೋಡಿತ್ತು. ಆದರೆ ತಾನು ಬಗದ್ದು ಒಂದು ಆದ್ದು ಮತ್ತೊಂದು ಹೇಳಿ ಆತು. ನಿನಗೆ ಕೆಲಸ ಪುತ್ತೂರಿಲ್ಲಿ ಸಿಕ್ಕಿದ ಕಾರಣ ಗಂಟು ಮೂಟೆ ಕಟ್ಟಿ ಮನೆ ಬಿಡೆಕಾಗಿ ಬಂತದ?" ಸಾತಕ್ಕನ ಮಾತು ಮತ್ತೂ ಮುಂದುವರಿಯುತ್ತಿತ್ತು.

"ಅಂಬಾಗ ಮನೆಬಿಟ್ಟು ಎಂಗೊ ಎದ್ದಿಕ್ಕಿ ಹೋದ್ದು. ನಿನಗೆ ರಜವೂ ಬೇಜಾರ ಆಯಿದಿಲ್ಲೆಯೋ ಅಬ್ಬೆ"

"ಒಂದು ಚೂರು ಬೇಸಾಯ ಆಯಿದಿಲ್ಲೆ. ನಿಂಗೊ ಇಲ್ಲಿ ಇಪ್ಪನ್ನಾರವೂ ಕುಚ್ಚಣಿಯ ಕೂಳೇ ಇತ್ತು ಎಂಗೊಗೆ. ನಿಂಗೊ ಹೋದ ಮತ್ತೆಯೇ ಸುಖದ ಕೂಳು ಕಂಡದು ಈ ಮನೇಲಿ. ಹೆಜ್ಜೆಯೋ ಗೊಜ್ಜಿಯೋ ಇದ್ದದ್ದರ ಬೇಶ್ಯೊಂಡು ಸುಖಲ್ಲಿ ಇತ್ತಿದ್ದಿಯೊ"

"ಕುಞಿ ಹೋದ ಹೇಳಿ ನಿನಗೆ ದುಃಖ ಆವುತ್ತಿಲ್ಲಿಯೋ"

"ದುಃಖ ಆವುತ್ತು. ಆನು ಅವನ ಹೆತ್ತ ಅಬ್ಬೆ ಅಲ್ಲದೋ. ಅತ್ಲಾಗಿ ಹೋಪಾಗ ಇತ್ಲಾಗಿ ಹೋಪಾಗ ಕಾಲಿಂಗೆ ತಾಂಚ್ಯೊಂಡು ಇದ್ದವ ಅವನೇ ಅಲ್ಲದೋ. ಅವಂ ಇಪ್ಪಾಗ ಎನ್ನ ಒಂದು ತೊಟ್ಟು ಕಣ್ಣೀರೂ ಭೂಮಿಗೆ ಬೀಳದ್ದ ಹಾಂಗೆ ನೋಡಿದ್ದ.

ಎನಗೆ ರಜಾ ಎಡಿಯದ್ದಾದರೂ "ನೀನೆಂತ ಮಾಡೇಡ ಅಬ್ಬೆ. ಆನು ಎಲ್ಲಾ ಮಾಡುವೆ' ಹೇಳಿ, ಹಶುವಿನ ಕರದು, ಕೆದೆ ಬಳದು, ಜಾಲುಡುಗಿ, ಪಾತ್ರ ತೊಳದು ಎಲ್ಲಾ ಮಾಡುಗು, ಆನು ಸುತ್ತಿದ ವಸ್ತ್ರಂಗಳ ಕೂಡಾ ತೋಡಿಂಗೆ ಹೋಗಿ ಒಗಕ್ಕೊಂಡು ಬಕ್ಕು. ನೀನು ಅಣ್ಣ ದೂರ ಹೋದ ಹೇಳಿ ಹೆದರೇಡಬ್ಬೆ. ಆ ನಿದ್ದೆ ಹೇಳಿ ಧೈರ್ಯ ತುಂಬಿದವ. ಈಗ ಅವನೇ ಇಲ್ಲದ್ದಾದ" ಸಾತಕ್ಕನಿಗೆ ದುಃಖ ತಡೆಯದ್ದಾಯಿತು. ಸೆರಗಿನಲ್ಲೊಮ್ಮೆ ಕಣ್ಣು ಒರಸಿಕೊಂಡರು.

"ನೀನು ಕೂಗೇಡಬ್ಬೆ. ನಿನಗೀಗ ಆನಿಲ್ಲೆಯೋ? ನಿನ್ನ ಬಿಟ್ಟು ಹಾಕುವನೊ"

"ನೀನಿದ್ದೆಪ್ಪ ಸಗಣದ ಹುಳುವಿನ ಹಾಂಗೆ. ನಿನ್ನಿಂದ ಆನು ಯಾವ ಪ್ರತಿಫಲವನ್ನೂ ಅಪೇಕ್ಷಿಸಿದ್ದಿಲ್ಲೆ. ಕುಞಿ ಹೋದ್ದು- ಎನ್ನ ಕೈ ಮುರುದ ಹಾಂಗೆ ಆತು"

"ಕುಞಿಗೆ ರಜಾ ಎಡಿಯದ್ದಿಪ್ಪಾಗ ಡಾಕ್ಟ್ರ ಹತ್ರೆ ತೋರ್ಸಿದ್ದರೆ – ಇಷ್ಟು ಬೇಗ ಕಣ್ಣು ಮುಚ್ಚುತ್ತಿತ್ತಾ ಇಲ್ಲೆ" ಸಾತಕ್ಕನ ಮೇಲೆ ಅಪವಾದ ಹೊರಿಸಲು ನೋಡಿದ ಕೇಶವ.

"ಎಂತ ಹೇಳಿದ್ದು ನೀನು? ನಿನಗೆ ಎರಡೆರಡು ಸರ್ತಿ ಆಚೆಗಾಣ ಶಂಭಟ್ಟನ ಹತ್ರೆ ಹೇಳಿ ಕಳುಸಿದ್ದೆ" ಕುಞಿಗೆ ಎರಡು ಮೂರು ತಿಂಗಳಿಂದ ಸೆಮ್ಮಜ್ವರ ಹೇಳಿಬತ್ತು. ಕಫಲ್ಲಿ ರಜಾ ನೆತ್ತರೂ ಬೀಳುತ್ತು. ಒಂದಾರಿ ಬಂದು ಕೊಡೆಯಾಲಕ್ಕೆ ಹೋಗಿ ಮದ್ದು ಮಾಡ್ಸು' ಹೇಳಿ ಅಂಬಾಗ ನೀನು ಹೇಳಿದ್ದೆಂತ?"

"ಕುಞಿಗೆ ಬೀಡಿ ಮುಕ್ಕೆಡ ಹೇಳು. ಬೀಡಿ ಎಳದೇ ಹಾಂಗಿಪ್ಪ ಕಾಯಿಲೆ ಬಪ್ಪದು. ಎನಗೀಗ ರಜೆ ಹಾಕಿ ಬಪ್ಪಲೆ ಪುರುಸೊತ್ತಿಲ್ಲೆ. ಅಲ್ಲೆ ಹತ್ರಾಣ ಪಂಡಿತನ ಹತ್ರಂದ ರಜಾ ಆಸವವನ್ನೋ ಅರಿಷ್ಟವನ್ನೊ ಕುಡುಶಲಿ ಗುಣ ಅಕ್ಕು ಹೇಳಿ ಕಳುಸಿದೆ. ಅನಾದರೂ ಕರಕ್ಕೊಂಡು ಹೋತಿಕ್ಕುವೆ ಹೇಳಿರೆ ಎನ್ನ ಹತ್ರೆ ಸುಟ್ಟು ತಿಂಬಲೆ ಕಾಸಿದ್ದತ್ತಿಲ್ಲೆ. ಎನಗೆ ಗೊಂತಿಪ್ಪ ಕಾಷಾಯಂಗಳ ಮಾಡಿ ಕುಡುಶಿದೆ. ಸೆಮ್ಮಜೋರಾದು ಅವಂಗೆ. ದಿನಂದ ದಿನಕ್ಕೆ ಮಾಣಿ ಬಚ್ಚಲೆ ಶಪಿ ಹಾಂಗೆ ಆದ. ಎದ್ದು ನಿಂಬಲೆ ಎಡಿಯದ್ದಾತು; ಅಶನ ದೊಂಡೇಲಿ ಇಳಿಯದ್ದಾತು"

"ಇಷ್ಟಾದರೂ ಎನಗೇಕೆ ತಿಳುಶಿದ್ದಿಲ್ಲೆ. ಆನು ಬಂದು ಎಂತಾರೂ ಮಾಡುತ್ತಿತ್ತಿಲ್ಲಿಯೊ"

"ನಿನಗೆ ಹೇಳಿ ಕಳುಶಿದ್ದಕ್ಕಲ್ಲದೋ ನೀನು ಮೋರಗೆ ತುಪ್ಪಿ ಕಳುಸಿದ್ದು?"

“ಮತ್ತೆ ಅವಂಗೆ ಮದ್ದು ಮಾಡಿದ್ದೇ ಇಲ್ಲೆಯೋ?”

ಒಂದಾರಿ ಮಾತೃಪಾಪಿ ಗೋವಿಂದ ಇತ್ಲಾಗಿ ಬಂದಿಪ್ಪಾಗ ಕುಞಿಯ ಅವಸ್ಥೆ ನೋಡಿ ದಂಗಾಗಿ ಹೋದ.

“ಇಷ್ಟು ಎಡಿಯದಿಪ್ಪಗಳೂ ಎನಗೊಂದು ಮಾತು ಹೇಳಿ ಕಳ್ಸಲೆ ಆವುತ್ತಿತ್ತಿಲ್ಲಿಯೋ ಸಾತತ್ತೆ ನಿನಗೆ” ಹೇಳಿ ಕೇಳಿದ.

“ನೀನೆಂತ ಹೇಳಿದೆ?”

“ಹೊಟ್ಟೆಲಿ ಹುಟ್ಟಿದ ಮಗನೇ ಕೆಮಿಗೆ ಹಾಕದಿಪ್ಪಾಗ ಇನ್ನಾರ ಹತ್ರೆ ಹೇಳ್ಳಿ ಮಗಾ? ನಿತ್ಯವೂ ದೇವರಿಂಗೆ ಕೈ ಮುಗುದು ‘ಎನ್ನ ಪಿಂಡನ ಉಳುಶು ದೇವರೇ ಹೇಳಿ ಕೈ ಮುಗಿವದರ ಬಿಟ್ಟು’ ಹೇಳಿದೆ”

‘ಸಾತತ್ತೆ ಆನು ಅಬ್ಬೆ ಇಲ್ಲದ ಮಾಣಿ ಹೇಳಿ ನಿತ್ಯವೂ ಎನ್ನ ಕಂಕುಳಲ್ಲಿ ಎತ್ತ್ಕೊಂಡು ಬಂದು ಹೊಟ್ಟೆ ತುಂಬಾ ಉಣಿಸಿ ಕಳುಸಿದ್ದೆ ನೀನು. ನಿನ್ನ ಮಕ್ಕೊಗೆ ಎಣ್ಣೆ ಕಿಟ್ಟಿ ಮೀಶುವಾಗ ಎನಗೂ ಎಣ್ಣೆ ಕಿಟ್ಟಿ ಹಳ್ಳದ ವರಗೆ ಕರಕ್ಕೊಂಡು ಹೋಗಿ ಮೀಶಿದ್ದೆ. ಎನಗೆ ಅಬ್ಬೆ ಸತ್ತಿದ್ದು ಹೇಳುದರ ಪೂರಾ ಮರಶಿದ್ದು ನೀನು.”

“ಅದೆಲ್ಲಾ ಆ ಸಮಯಲ್ಲಿ ಮಾಡೆಕು ಹೇಳಿ ಕಂಡತ್ತು. ಮಾಡಿದ್ದೆ.”

‘ನಿನ್ನ ಋಣವ ರಜಾದರೂ ಆನು ತೀರ್ಸೆಡದ. ನಾಳಂಗೇ ಆನು ಕುಞಿಯ ಕರಕ್ಕೊಂಡು ಕಣ್ಯಾರಕ್ಕೆ ಹೋವುತ್ತೆ. ಅಲ್ಲಿ ಒಳ್ಳೆ ಡಾಕ್ಟ್ರಂಗೆ ತೋರ್ಸಿ ಎದೆಯ ಪೋಟೋ ತೆಗೆಶಿಗೊಂಡು ಬತ್ತೆ. ಅವನ ಕಾಯಿಲೆಯ ಅವು ಕಂಡು ಹಿಡಿಗು. ಮದ್ದಿನ ವಿಚಾರ ಮುಂದೆ ನೋಡುವೊ. ನೀನು ಉದಿಯಪ್ಪಗಳೇ ಅವನ ತಯಾರು ಮಾಡ್ಸಿ ಮಡುಗು. ಆನು ಎಂಕನ ಗಾಡಿಲಿ ಕೂರ್ಸಿ ಅವನ ಕರಕ್ಕೊಂಡು ಹೋಪೆ. ಈ ಸ್ಥಿತಿಲಿ ಅವಂಗೆ ನೆಡವಲೇ ಎಡಿಯ ಆತೋ?” ಹೇಳಿದ.

“ಎನ್ನ ಹತ್ರೆ ಬಿಡಿ ಕಾಸೂ ಇಲ್ಲೆ ಮಗಾ. ಎಷ್ಟಾದರೂ ಕಣ್ಯಾರಕ್ಕೆ ಹೋಗಿ ಬರೇಕಾರೆ ನೂರು ರೂಪಾಯಿ ಆದರೂ ಬೇಡದೋ?” ಕೇಳಿದೆ.

“ನಿನ್ನ ಹತ್ರೆ ಪೈಸೆ ಶುದ್ಧಿ ಕೇಳಿದ್ದನೋ ಆನು? ಆನು ಕರ್ಚಿ ಮಾಡಿ ಕರಕ್ಕೊಂಡು ಹೋಪೆ ಆತೋ?” ಹೇಳಿದ.

"ಆತು ಹೇಳದ್ದೆ ಎನಗೆ ಬೇರೆ ದಾರಿ ಇತ್ತಿಲ್ಲೆ. ಮಾಣಿ ನರಳುದರ ನೋಡ್ಳೆ ಎಡಿತ್ತಿತ್ತಿಲ್ಲೆ."

"ಮತ್ತೆ?"

"ಹೇಳಿದ ಹಾಂಗೆ ಗೋವಿಂದ ಅವನ ಕಣ್ಯಾರಕ್ಕೆ ಕರಕ್ಕೊಂಡು ಹೋಗಿ ಡಾಕ್ಟ್ರ ಹತ್ರೆ ತೋರ್ಸೆಂಡು ಬಂದ."

"ಡಾಕ್ಟ್ರು ಎಂತ ಹೇಳಿದಾಂಡ?"

ಇದು ಕಾಯಿಲೆ ಕೈ ಮೀರಿದ್ದು. ಇದಕ್ಕೆ ಬೇಕಾದ ಮದ್ದು ಇಲ್ಲೆಲ್ಲೂ ಸಿಕ್ಕ. ಬೊಂಬಾಯಿಗ್ ಹೋಯೇಕು. ನಿಂಗೊ ಆದಷ್ಟು ಬೇಗ ಬೊಂಬಾಯಿಗೆ ಕರಕ್ಕೊಂಡು ಹೋಗಿ" ಹೇಳಿದವಾಡ

"ಸಾತತ್ತೆ ನೀನು ಹೆದರೇಡ. ಆನು ಅವನ ಕರಕ್ಕೊಂಡು ನಾಳಂಗೇ ಬೊಂಬಾಯಿಗೆ ಹೋವುತ್ತೆ ಡಾಕ್ಟ್ರಕ್ಕೊ ಕೊಟ್ಟಾ ವಿಳಾಸದ ಆಸ್ಪತ್ರೆಲಿ ಎನ್ನ ಗುರ್ತದವ ಒಬ್ಬ ಕಾಂಪೌಂಡರಾಗಿ ಕೆಲಸ ಮಾಡುತ್ತ ಅಲ್ಲಿಯೇ ಇರೇಕು ಹೇಳಿ ಆದರೆ ಅಲ್ಲಿ ಸೇರ್ಸಿಕ್ಕಿಯೇ ಬತ್ತೆ ಅಲ್ಲಿ ಮದ್ದು, ಊಟ, ಉಪಚಾರ ಎಲ್ಲಾ ಧರ್ಮಾರ್ಥ ಅವುತ್ತು. ಹೋಗಿ ಬಪ್ಪ ಖರ್ಚು ಮಾಂತ್ರ ನಮ್ಮದು ಅಷ್ಟೆ ಹೇಳಿದ. ಆದರೂ ಬೊಂಬಾಯಿ ಹೇಳಿರೆ ಹತ್ರಾಣ ದಾರಿಯೋ. ಏನಿಲ್ಲೆ ಹೇಳಿರೂ ಐನ್ನೂರು ರೂಪಾಯಿ ಆದರೂ ಬೇಕು ಹೇಳಿ ಆಲೋಚನೆ ಮಾಡಿ. ಎನ್ನ ಕೊಪ್ಪುಗಳ ಕಳಚ್ಚಿ ಗೋವಿಂದನ ಕೈಲಿ ಮಡುಗಿದೆ."

"ಗೋವಿಂದ ಇದರ ಮಾರು." ಹೇಳಿದೆ. ಗೋವಿಂದಂಗೆ ಕೋಪ ಬಂತು.

"ಸಾತತ್ತೆ ನೀವೆನ್ನ ಹೆತ್ತಬ್ಬೆಂದ ಹೆಚ್ಚು ಎನ್ನ ನೋಡಿದ್ದೆ. ನಿನ್ನ ಋಣ ಎನ್ನ ಮೇಗೆ ಇದ್ದು ಕುಞಿ ಎನ್ನ ಒಡಹುಟ್ಟಿದ ತಮ್ಮ ಹೇಳಿ ಜಾನ್ಸಿದ್ದೆ. ಅವಂಗೆ ಬೇಕಾಗಿ ಎಷ್ಟು ಬೇಕಾದರೂ ಕರ್ಚು ಆನು ಮಾಡುವೆ. ಎನಗೀಗ ಬೇಕಾದಷ್ಟು ಸಂಬಳ ಬತ್ತುಮಕ್ಕೊ. ಮರಿಗೋ ಆರೂ ಇಲ್ಲೆ. ಎನ್ನ ಕರ್ಚು ನೋಡ್ಯೋಂಡರಾತು. ಇದಾ ನಿನ್ನ ಕೊಪ್ಪುಗಳ ನಿನ್ನ ಹತ್ರೇ ಮಡಿಕ್ಕೋ" ಹೇಳಿ, ಅದರಲ್ಲಿ ಮಡುಗಿಕ್ಕಿ ಹೋದ.

ಮಾರ್ಣೇ ದಿನವೇ ಕುಞಿಯ ಕರಕ್ಕೊಂಡು ಬೊಂಬಾಯಿಗೆ ಹೋದ. ಎರಡು ದಿನ ಅಲ್ಲಿದ್ದು ಬಪ್ಪಾಗ ಕುಞಿಯ ಕರಕ್ಕೊಂಡೇ ಬಂದ.

"ಎಂತಕೆ? ಅಲ್ಲಿ ಆಸ್ಪತ್ರೆಲಿ ಸೇರಿಕೆ ಮಾಡಿದ್ದಿಲ್ಲಯೋ?"

"ಅಲ್ಲಿ ಸುಮಾರು ಡಾಕ್ಟ್ರಕ್ಕೆ ಎಲ್ಲಾ ಪರೀಕ್ಷೆ ಮಾಡಿದವಾಡ. 'ಇದು ಕೈ ಮೀರಿದ ಕಾಯಿಲೆ. ಹೆಚ್ಚು ಹೇಳಿರೆ ಇನ್ನೆರಡು ತಿಂಗಳು ಬದುಕುಗಷ್ಟೆ' ಹೇಳಿದವಾಡ"

ಹಾಂಗೆ ಅಲ್ಲಿಂದ ಬಂದವ ಕುಞ ಎರಡೇ ತಿಂಗಳಿಂಗೆ ಕಣ್ಣು ಮುಚ್ಚಿದ. ಸಾತಕ್ಕನ ಕಣ್ಣೀರು ಕೋಡಿಯಾಗಿ ಹರಿಯಿತು.

ಕೇಶವನಿಗೆ ದುಃಖವಾಯಿತು. ತಮ್ಮನ ಅಕಾಲ ಮರಣಕ್ಕೆ ತಾನೇ ಕಾರಣವೆಂಬ ಅಪರಾಧಿ ಭಾವವೂ ತುಂಬಿತು. ಕಣ್ಣಿನಲ್ಲಿ ಹನಿಗಳು ಉದುರತೊಡಗಿತು.

"ಅದೇ ಅವನ ಕತೆ ಮುಗುದ ಕೂಡ್ಲೆ ನಿನಗೆ ಹೇಳಿ ಕಳ್ಸಿದ್ದು".

"ಎನಗೆ ಅವನ ಹೆಣವೂ ಕಾಂಬಲೆ ಸಿಕ್ಕಿದ್ದಿಲ್ಲೆ".

"ಎಷ್ಟಾದರೂ ನಿನಗೆ ಜೆನ ಕಳ್ಸಿ ನೀನು ಇಲ್ಲಿಗೆ ಮುಟ್ಟೇಕಾರೆ ಎರಡು ದಿನ ಆದರೂ ಬೇಕು ಅಷ್ಟ್ರವರೆಗೆ ಹೆಣ್ಣ ಮಡಿಕ್ಕೊಂಡು ಹೇಂಗಿಪ್ಪದು? ಗೋವಿಂದನೇ ನೆರ್ ಕರೆಯವರ ದಿನಿಗೇಳಿ ಎಲ್ಲಾ ವ್ಯವಸ್ಥೆ ಮಾಡಿದ."

"ಸಾತತ್ತೆ ನೀನು ಇದರೆಲ್ಲಾ ನೋಡ್ಯೊಂಡು ಕೂರೇಡ. ಒಂದು ಕೋಣೆಲಿ ಮನಿಕ್ಕೊ. ಆನೆಲ್ಲಾ ವ್ಯವಸ್ಥೆ ಮಾಡುವೆ. ಆನೂ ನೀನು ಹೆತ್ತ ಮಗನೇ ಹೇಳಿ ಜಾನ್ಸಿಗೋ" ಹೇಳಿ ಎನ್ನ ಕೈ ಹಿಡಿದು ಕೋಣೆಗೆ ಕರಕ್ಕೊಂಡು ಹೋಗಿ ಮನುಶಿ ಹೋದಶಿಕ್ಕಿ ಬಂದ. ಆನು ಕಣ್ಣಬಿಡೇಕಾರೆ ಎಲ್ಲಾ ಮಾಡಿ ಮುಗುಶಿದ್ದ."

"ಇಷ್ಟೆಲ್ಲಾ ಆದಿಪ್ಪಾಗಳೂ, ಆನು ಇದ್ದೆ ಹೇಳಿ ಎನಗೊಂದು ಮಾತೂ ತಿಳೀಶಿದ್ದಿಲ್ಲೆನ್ನೆ ಅಬ್ಬೆ. ಆನಂತ ಅಷ್ಟಕ್ಕೂ ಬೇಡದ್ದೆ ಆದ ಪಿಂಡ ಆದನೋ ನಿನ್ನ ಪಾಲಿಂಗೆ?" ಕೇಶವನಿಗೆ ದುಃಖ ಉಮ್ಮಳಿಸಿ ಬಂತು.

"ನೀನು ಹೇಳಿ ಕಳುಸಿದ ಮಾತಿಂದಲೇ ಎನಗೆ ಅರ್ಥ ಆತು. ನೀನೊಂದು ಉಪಯೋಗಕ್ಕೆ ಬಪ್ಪ ಮಾಣಿ ಅಲ್ಲ ಹೇಳಿ. ಕುಞಿಗೆ ಎಡಿಯದಿಪ್ಪಾಗ ನೀನು ಹೇಳಿದ ಜವಾಬೇ ಎನಗೆ ಇನ್ನೂ ಕರಗಿದ್ದಿಲ್ಲೆ. ಹಾಂಗಾಗಿ ಹೇಳಿ ಕಳುಸಿದ್ದಿಲ್ಲೆ. ಸಾಯುವವು ಹೇಂಗಾದರೂ ಸಾಯುತ್ತವು. ಅವಕ್ಕೆ ಆಯುಶ್ಯ ಕೊಡ್ಲೆ ನೀನಾರು? ಆನಾರು? ಹಾಂಗಾಗಿ ನಿನ್ನ ಶುದ್ಧಿಗೇ ಬಯಿಂದಿಲ್ಲೆ" ಸಾತಕ್ಕನ ವಿವರಣೆ ಕೇಳಿ ಕೇಶವನಿಗೆ ಮಾತೇ ಹೊರಡಲಿಲ್ಲ.

“ಅದ್ದೆಲ್ಲಾ ಆಗಿ ಹೋತಬ್ಬೆ. ಇನ್ನದರ ಜಾನ್ಸಿ ಪ್ರಯೋಜನ ಇಲ್ಲೆ. ಇನ್ನಾದರೂ ಒಬ್ಬನೇ ಇಲ್ಲಿ ಅಸಬಡಿಯೇಡ. ಎನ್ನೊಟ್ಟಿಂಗೆ ಬಾ. ಆನು ನಿನ್ನ ಕೂದಲು ಕೊಂಕದ್ದ ಹಾಂಗೆ ನೋಡ್ಯೊಂಬೆ. ಎನ್ನಂದಾದ ತಪ್ಪುಗಳೆಲ್ಲಾ ಕ್ಷಮಿಸು” ಹೇಳಿದ ಕೇಶವ.

“ಆನು ನಿನ್ನೊಟ್ಟಿಂಗೆ ಬತ್ತಿಲ್ಲೆ ಮಗಾ. ಸಾವನ್ನಾರವೂ ಇಲ್ಲಿಯೇ ಇರುತ್ತೆ. ಈ ಮಣ್ಣಿಲ್ಲೇ ಮಣ್ಣಾಗಿ ಹೋವುತ್ತೆ”

ನಿನ್ನ ಈ ಸ್ಥಿತಿಲಿ ಬಿಟ್ಟಿಕ್ಕಿ ಹೇಂಗೆ ಹೋಯೇಕು ಆನು? ಎನ್ನೊಟ್ಟಿಂಗೆ ಬತ್ತಿಕ್ಕು” ಅಂಗಲಾಚಿದ ಕೇಶವ.

ಆನು ಮದಲೆ ಹೇಂಗೆ ಇಲ್ಲಿದ್ದನೋ ಹಾಂಗೇ ಇಪ್ಪೆ ಇಲ್ಲಿ. ಎನಗಿಲ್ಲಿ ಯಾವ ತೋಂದರೆಯೂ ಇಲ್ಲೆ. ನೀನು ನಿನ್ನಷ್ಟಕ್ಕೆ ಹೋಗು”

“ಎಂತಕೆ ಆನು ನಿನ್ನ ಸರಿಯಾಗಿ ನೋಡೆ ಹೇಳುವ ಹೆದರಿಕೆಯೋ ನಿನಗೆ?” ಇಷ್ಟೆಲ್ಲಾ ಕೇಳಿದ. ಮತ್ತೆ ಎನಗೆ ನಿನ್ನ ಬಿಟ್ಟಿಕ್ಕಿ ಹೋಪಲಾದರೂ ಮನಸ್ಸು ಹೇಂಗೆ ಬಕ್ಕು ನೀನೇ ಹೇಳು. ಆನೂ ನೀನು ಹೆತ್ತು ಸಾಂಕಿದ ಮಗನೇ ಅಲ್ಲದೋ?”

“ಅಲ್ಲ ಹೇಳಿ ಆರು ಹೇಳಿದ್ದವು ಮಗಾ? ನೀನು ಎನ್ನ ಮಗನೇ. ಆದರೆ ನಿನ್ನ ಹೆಂಡತಿ ಎನ್ನ ಮಗಳಲ್ಲ. ಆನದರ ಹೆತ್ತಿದೂ ಇಲ್ಲೆ ಸಾಂಕಿದೂ ಇಲ್ಲೆ. ಎನಗದರ ಒಟ್ಟಿಂಗೆ ಏಗ್ಯೊಂಬಲೆ ಎಡಿಯ.”

“ಅದರ ಬಾಯಿ ಮುಚ್ಚುಸುವ ಕೆಲಸ ಎನ್ನದು. ಹೇಳಿದ್ದು ಕೇಳದಿದ್ದರೆ ಎರಡು ಬಿಗುದಾದರೂ ಸರಿ ಮಾಡುವೆ. ನೀನು ಅದಕ್ಕೆ ಬೇಕಾಗಿ ಬಾರದ್ದೆ ಇರೇಡ”.

“ಹಾಂಗಾಗಿಯೇ ಆನು ಬತ್ತಿಲ್ಲೆ ಹೇಳಿದ್ದು. ನೀನು ಎನಗೆ ಬೇಕಾಗಿ ಬಡುದು, ದಣುಶುದು ಎನಗೆ ಇಷ್ಟ ಇಲ್ಲೆ ಮಗಾ. ಎನಗೆ ಬೇಕಾಗಿ ನಿಂಗೊ ನಿತ್ಯ ಲಡಾಯಿ ಮಾಡುದು. ಕಣ್ಣಿರು ಇಳುಶುದು ಎನಗೆ ಖುಷಿ ಕೊಡ. ಅದೂ ಎನ್ನ ಹಾಂಗೆ ಈ ಮನೆಗೆ ಹೊಕ್ಕದು. ಬಾಳಿ ಬದುಕ್ಕೇಕು ಹೇಳಿ ಬಂದರು. ಎನ್ನಂದಾಗಿ ನಿಂಗಳ ಬದುಕ್ಕು ಹಾಳಪ್ಪಲಾಗ. ನಿಂಗೋ ಚೆಂದಲ್ಲಿ ಇರೇಕು ಹೇಳಿಯೇ ಎನ್ನ ಆಶೆ.”

“ನಿನಗೆ ಪುಳ್ಯಕ್ಕಳ ಒಟ್ಟಿಂಗೆ ಇರೇಕು ಹೇಳಿ ತೋರುತ್ತಿಲ್ಲೆಯೋ ಅಬ್ಬೆ” ಕೇಳಿದ ಕೇಶವ.

"ಮದಲು ತೋರ್ಯೊಂಡು ಇತ್ತು ಈಗ ಎಂತದೂ ಇಲ್ಲೆ."

"ನಿನ್ನ ಮನಸ್ಸು ಕಲ್ಲಾಯಿದು ಅಬ್ಬೆ. ಅದರ ಕರಗುಸುವ ಸಾಮರ್ಥ್ಯ ಎನ್ನಲ್ಲಿ ಇಲ್ಲದ್ದಾತು" ಹೆಳಿ ಮಾತು ಮುಗಿಸಿದ ಕೇಶವ. ಇಷ್ಟಿರುವಾಗ ರಾತ್ರಿಯಾಗಿತ್ತು. ಸಾತಕ್ಕ ಮಗನಿಗೆ ಊಟಕ್ಕೆ ಎಬ್ಬಿಸಿದಳು. ಇಬ್ಬರೂ ಮತ್ತೆ ಮೌನವಾಗಿ ಊಟ ಮುಗಿಸಿದರು. ಹೊತ್ತಿಗೆ ಸರಿಯಾಗಿ ಚಾಪೆ ಹಾಸಿ ಮಲಗಿಕೊಂಡರು.

ಮರುದಿನ ಬೆಳಿಗ್ಗೆ ಕೇಶವ ಊರಿಗೆ ಹೊರಡುವವನಿದ್ದ.

"ಅಬ್ಬೆ ಎನಗೆ ಇರುಳೀಡೀ ಒರಕ್ಕು ಬಯಿಂದಿಲ್ಲೆ. ಎನ್ನ ಹೆಂಡತಿ ಸಾವಿತ್ರಿ ಎಂತೆಲ್ಲಾ ಮಾಡಿದ್ದೋ ಅಬ್ಬಗೆ ಹೇಳಿ ಕೊರಗಿದ್ದೆ. ಒಂದಾರಿ ಮಗಳು ಮಾಲತಿ, 'ಅಪ್ಪ ಈ ಸರ್ತಿ ರಜೇಲಿ ಅಜ್ಜಿ ಇದ್ದಲ್ಲಿಗೆ ಹೋಪೊಪ್ಪ" ಹೇಳಿತ್ತು.

"ಎಂತಕೆ ಮಗಳೇ?" ಕೇಳಿದ್ದೆ

"ಅಲ್ಲಿ ಬೇಕಾದಷ್ಟು ಹಲಸಿನ ಹಣ್ಣು ತಿಂಬಲಕ್ಕು. ನಾವು ಬತ್ತು ಹೇಳಿ ಗೊಂತಾದರೆ ಅಪ್ಪಚ್ಚಿ ಬಾಳೆ ಗೊನೆಯನ್ನೇ ತಂದು ಮನೆಲಿ ಮಡಗ್ಗು. ಎಂಗೊ ತಿಂಬಷ್ಟು ಪೇರಳೆ, ಅನಾನಾಸು, ಕೊಯ್ದುಕೊಡುಗು. ಅಪ್ಪಚ್ಚಿ ಒಟ್ಟಿಂಗೆ ತೋಟಕ್ಕೆ ಹೋದರೆ ಹಣ್ಣಡಕ್ಕೆ ಹೆರುಕ್ಕಲಾವುತ್ತು. ಎಂಗೊಗೆ ಅಲ್ಲಿ ಗಮ್ಮತ್ತಾವುತ್ತು" ಈ ಮಾತು ಕೇಳಿದ್ದೇ ತಡ ಸಾವಿತ್ರಿಗೆ ಕೋಪ ಬಂತು.

"ಎಂತ ಹೇಳಿದ್ದು ನೀನು? ಅಜ್ಜಿ ಇದ್ದಲ್ಲಿಂಗೆ ಹೋಯೇಕು ನಿನಗೆ? ಆ ಸುಡುಗಾಡಿಲ್ಲಿ ಎಂತ ಇದ್ದು? ಇನ್ನೊಂದಾರಿ ಬಾಯಿ ಬಿಟ್ರೆ ನಿನ್ನ ಬಾಯಿಗೆ ಕರಂಡಿ ಬೆಶಿ ಮಾಡಿ ಕಾಸಿ ಮಡಗುವೆ. ರಜೆಲಿ ನಾವು ಹೋಪದು ಅಜ್ಜನ ಮನೆಗೆ. ನಿನ್ನ ಅಜ್ಜಿ ಮನೆಗೆಲ್ಲ." ಹೇಳಿ ಅರ್ಭಟಿಸಿದ್ದು ಕೂಸು ಕಣ್ಗ್ಯೊಂಡು ಒಳಹೋಗಿ ಮನುಗಿ ಒರಗಿತ್ತು. ಅಂಬಗಳೂ ಎನಗೆ ಸಾವಿತ್ರಿಯ ರಾಕ್ಷಸ ಗುಣ ಅರ್ಥ ಆಯಿದಿಲ್ಲೆ. ಈಗ ಅರ್ಥ ಅಪ್ಪಾಗ ಉದಿ ಆಗಿ ಹೋತು" ಹೇಳಿ ಬೇಜಾರ ಮಾಡಿದ. ಅಬ್ಬೆ ಸಮಾಧಾನ ಮಾಡಿದಳು.

ಅವನು ಹೊರಡುವಾಗ ಶಂಭಟ್ಟನೂ ಗೋವಿಂದನೂ ಮನೆಗೆ ಬಂದಿದ್ದರು. ಕೇಶವ ಅವರಿಬ್ಬರ ಕೈಯನ್ನೂ ಹಿಡಿದು,

"ಅಬ್ಬೆ ಎನ್ನೊಟ್ಟಿಂಗೆ ಬಾ ಹೇಳಿರೆ ಸರ್ವಥಾ ಬಪ್ಪಲೆ ತಯಾರಿಲ್ಲೆ. ಅನಿಲ್ಲಿಯೇ ಇರುತ್ತೆ ಹೇಳುತ್ತು. ಎಂತ ಮಾಡದು, ಎನ್ನ ಹಣೆಲಿ ಬರದ್ದೇ ಅಷ್ಟು. ಇನ್ನು ಮುಂದೆ ಅಬ್ಬೆಯ ನೋಡ್ದೊಂಬ ಜವಾಬ್ದಾರಿ ನಿಂಗಳದ್ದು" ಹೇಳಿ ಕಣ್ಣೀರು ಹಾಕಿದ.

"ಕೇಶವಣ್ಣಾ, ನೀನು ಚಿಂತೆ ಮಾಡೇಡ. ಅದು ನಿನ್ನ ಹೆತ್ತಬ್ಬೆ ಆದಿಕ್ಕು. ಆದರೆ ಅದು ಎಂಗಳೆಲ್ಲಾ ಸಾಂಕಿದ ಅಬ್ಬೆಯೂ ಅಪ್ಪು. ಎಂಗೊ ಎಲ್ಲೋರೂ ಅದರ ಚೆಂದಕ್ಕೆ ನೋಡ್ಯೋಂಬೆಯೊ. ನೀನು ಚಿಂತೆ ಮಾಡ್ಯೇಡ ಅತೋ?"

"ಅಬ್ಬಗೆ ರಜಾ ಯಡಿಯದ್ದಾದರೂ ಎನಗೆ ತಿಳುಶಿ ಆನು ಕೂಡ್ಲೆ ಬಪ್ಪೆ" ಹೇಳಿದ.

"ಎಡಿಯದ್ದಿಪ್ಪಾಗ ಮಾತ್ರ ಅಲ್ಲ, ಅಂತೆ ಇಪ್ಪಾಗಳೂ ತಿಂಗಳಿಗೊಂದಾರಿ ಬಂದು ನೋಡಿಕ್ಕಿ ಹೋಗು. ನೊಂದ ಜೀವಕ್ಕೆ ಎಷ್ಟೋ ಸಮಾಧಾನ ಅಕ್ಕು" ಹೇಳಿದರು. ಶಂಭಟ್ಟ ಗೋವಿಂದ.

"ಖಂಡಿತಾ ಬತ್ತೆ" ಹೇಳಿದ ಕೇಶವ. ಒಳಗೆ ಹೋಗಿ ಅಮ್ಮನಿಗೆ ನಮಸ್ಕರಿಸಿದ.

"ಆತು ಅಬ್ಬೆ ಆನೀಗ ಹೋವುತ್ತೆ ಮುಂದಾಣ ತಿಂಗಳಲ್ಲಿ ಬತ್ತೆ" ಹೇಳಿ ಮನಸ್ಸಿಲ್ಲದ ಮನಸ್ಸಿನಿಂದ ಅಂಗಳಕ್ಕಿಳಿದು ಊರ ದಾರಿ ಹಿಡಿದ.

ಮನೆಗೆ ಬಂದೊಡನೆ ಸಾವಿತ್ರಿ "ಎಂತ ನಿಂಗೊ ಒಬ್ಬನೇ ಬಂದುದು? ಅತ್ತ್ಯೋರು ಬಯಿಂದಾವಿಲ್ಲೆಯೊ? ಅಸ್ತಿ ಮಾರಿ ಆತೋ?" ಕಾತರದಿಂದ ಪ್ರಶ್ನಿಸಿದಳು.

"ಅತ್ತ್ಯೋರು ಬತ್ತವಿಲ್ಲೆ. ನಾವೇ ಅಲ್ಲಿಗೆ ಹೋಯೇಕು. ಆಸ್ತಿ ಮಾರುವ ಪರಿಸ್ಥಿತಿ ಇಲ್ಲೆ. ಎನ್ನ ಅಬ್ಬೆ ಇಪ್ಪನ್ನಾರ ಅಲ್ಲಿಯೇ ಇರುತ್ತು. ನಿನ್ನ ಚಾಕ್ರಿಗೆ ಅದೆಂದೂ ಸಿಕ್ಕ" ಹೇಳಿದ ಕೇಶವ.

ಯಾಕೋ ಗಂಡ ಸ್ವಲ್ಪ ಬಿಗುವಾಗಿಯೇ ಮಾತನಾಡಿದ್ದು ಸಾವಿತ್ರಿಗೆ ಇಷ್ಟವಾಗಲಿಲ್ಲ.

ಮನೆ ಒಳಗೆ ಮಾಲತಿ ಇದ್ದಳು.

"ಮಗಳೋ, ಇನ್ನು ಮುಂದೆ ಪ್ರತಿ ರಜೆಲ್ಲೂ ನಾವು ಅಜ್ಜಿ ಇದ್ದಲ್ಲಿಂಗೇ ಹೋಪೋ ಆತೋ? ಆನೂ ಬತ್ತೆ ನಿನ್ನೊಟ್ಟಿಂಗೆ" ಹೇಳಿದ

"ಲ್ಯಾಕಾತಪ್ಪ, ಎನಗೆ ಅಲ್ಲಿಪ್ಪದು ಹೇಳಿರೆ ತುಂಬಾ ಖುಷಿ, ಅಜ್ಜಿ ಹೇಳಿರೆ ಎನಗೆ ತುಂಬಾ ಪ್ರೀತಿ ಅಪ್ಪ" ಹೇಳಿದಳು ಮಗಳು ಮಾಲತಿ

ಇನ್ನು ತನ್ನ ದರ್ಬಾರಿಗೆ ಕಡಿವಾಣ ಬಿದ್ದ ಹಾಗೆ ಎಂದು ನೊಂದಳು ಸಾವಿತ್ರಿ.

O

# ರತ್ನಮಾಲನ ವರಾನ್ವೇಷಣೆ

"ಅಬ್ಬೆ –ಅದೆಂತದೋ ನೀನೂ ಅಪ್ಪನೂ ಗುಸುಗುಸೂ ಮಾತಾಡ್ಯೊಂಡು ಇತ್ತಿದ್ದದು. ಎನಗೂ ರಜಾ ಹೇಳಿ, ಆನೂ ರಜಾ ಕೇಳುತ್ತೆ."

"ಅದು ನೀನು ಕೇಳ್ಳೆ ಬೇಕಾದ ವಿಷಯ ಅಲ್ಲ. ಅದು ಎಂಗೊಗೆ ಸಂಬಂಧಪಟ್ಟ ವಿಷಯ. ಅದರಲ್ಲೆಲ್ಲಾ ನೀನು ಬಾಯಿ ಹಾಕಲಾಗ"

"ಎಂತಬ್ಬೆ ಆನು ಮಲೆ ತಿಂಬ ಸಣ್ಣ ಕೂಸೊ? ಎನಗೆ ಹದಿನೆಂಟು ವರ್ಷ ಕಳ್ಳಿತ್ಲೆಯೋ ಈ ಮನೇಲಿ ಎನ್ನ ಬಿಟ್ಟರೆ ಬೇರೆ ಅರಿದ್ದವು? ಆನು ಕೇಳಿರೆ ಎಂತಾವುತ್ತು ನಿಂಗೊಗೆ? ಅಷ್ಟೊಂದು ಗಹನ ವಿಚಾರವೋ?"

"ನೀನು ಕೇಳ್ಳಾಗ ಹೇಳಿ ಎಂತದೂ ಇಲ್ಲೆ ಮಗಳೆ. ನಾಳಂಗೆ ನಿನ್ನ ನೋಡ್ಲೆ ಹೇಳಿ ಒಬ್ಬ ಮಾಣಿಯ ನಿನ್ನ ನರಸಿಂಮಾವ ಕರಕ್ಕೊಂಡು ಬತ್ತೆ ಹೇಳಿ ಹೇಳಿ ಕಳುಸಿದ್ದೆ. ಅದರನ್ನೇ ಎಂಗೊ ಮಾತಾಡಿಕೊಂಡದು".

"ಆರು ಮಾಣಿ?"

"ಕಾಡುಕೋಣಮ್ಮೆ ಹೇಳುವ ಹೆಸರು ಕೇಳಿದ್ದೆಯೋ?"

"ಕೇಳದ್ದೆಂತಬ್ಬೆ. ಅದು ಭಟ್ಟಕ್ಕಳ ಮನೆ ಅಲ್ಲದೋ?

"ಅಪ್ಪು ನಿನಗೆ ಹೇಂಗೆ ಗೊಂತು?"

" ಆ ಶಂಕರಭಟ್ರ ಮಗಳು ಶಾರದೆ ಹೇಳುವ ಕೂಸು ಎನ್ನೊಟ್ಟಿಂಗೆ ಕಣ್ವೈರ ಮಾದ್ರಿಗಳ ಶಾಲಗೆ ಬಂದುಗೊಂಡು ಇತ್ತು. ಏಳನೆ ಕ್ಲಾಸಿಂದ ಮತ್ತೆ ಆನು ಅದರ ಕಂಡಿದ್ದಿಲ್ಲೆ. ಆನೂ ಮತ್ತೆ ಬೇರೆ ಶಾಲಗೆ ಹೋದೆನ್ನೆ. ಮಂಜೇಶ್ವರಕ್ಕೆ ಹೋಗಿ ಅಲ್ಲದೊ ಆನು ಮೆಟ್ರಿಕ್ಕು ಕಲ್ತದು."

ನೀನು ಹೇಳಿದ್ದು ಸರಿ ಮಗಳೆ. ಆ ಕೂಸಿನ ಅಣ್ಣ ಬಿ.ಎ. ಪರೀಕ್ಷೆ ಕಟ್ಟಿದ್ದಾಂಡ. ನೋಡ್ಲೂ ಚೆಂದ ಇದ್ದಾಡ. ಒಬ್ಬನೇ ಮಾಣಿ ಹತ್ತು ಖಂಡಿ ಅಡಕ್ಕೆ ಸ್ವಂತ ಮನೆ ಇದ್ದಾಡ. ಅವಂಗೆ ನಿನ್ನ ಧಾರಾಳ ಕೊಡ್ಳಕ್ಕು ಹೇಳಿ ನಿನ್ನ ಮಾವ ಹೇಳಿದ್ದಾಂಡ. ಅದಕ್ಕೆ 'ಮಾಣಿಯ ಕರಕ್ಕೊಂಡು ಬತ್ತೆರತ್ನ ಮನೇಲಿಯೇ ಇರಳಿ. ಎಲ್ಲಿಗೂ ಕಳುಸೇಡಿ" ಹೇಳಿ ಹೇಳಿ ಕಳುಸಿದ್ದ."

"ಎಂತಾ ಮಾವನ ಮಗಳು ಸುಮತಿಯ ಕೂಡ್ಳಾವುತ್ತಿತ್ತಿಲ್ಲೆಯೋ?"

"ಅದೆಲ್ಲಾ ಸಂಗತಿ ಎನಗೆಂತಕೆ? ನೀನು ನಾಳಂಗೆ ಮನೇಲಿಯೇ ಇರು. ಎಲ್ಲಿಗೂ ಹೋಗೇಡ" ಹೇಳಿ ಅಬ್ಬೆ ಸುಬ್ಬಮ್ಮ ಹೆರಡ್ಳೆ ತಯಾರಾತು.

"ಎಲ್ಲಿಗೆ ಹೆರಟದು ಅಬ್ಬೆ. ರಜಾ ಕೂರು. ಹೇಳಿ ಕೇಳಿ ಒಬ್ಬ ಭಟ್ಟನ ಕೊರಳಿಂಗೆ ಕಟ್ಟೇಕು ಹೇಳಿ ನಿಂಗೊ ಆಲೋಚನೆ ಮಾಡುತ್ತಿರನ್ನೆ. ನಿಂಗೊಗೆ ಬುದ್ದಿ ಇದ್ದೊ?"

ನಿನಗಿದ್ದನ್ನೆ ತಲೆ ಊರು ಸುಡ್ಳೆ ಸಾಕು. ಅಲ್ಲಾ ಭಟ್ಟಕ್ಕೊ ಆದರೆ ಎಂತಾವುತ್ತು. ಅವಕ್ಕೆ ಊರವೆಲ್ಲಾ ಎಷ್ಟು ಮರ್ಯಾದೆ ಕೊಡುತ್ತವು ನಿನಗೆ ಗೊಂತಿದ್ದೊ? ಇಡೀ ಗ್ರಾಮದ ಪೌರೋಹಿತ್ಯ ಅವರದ್ದೆ. ಒಳ್ಳೆ ಸಂಪಾದನೆಯೂ ಇರುತ್ತು. ಅವು ಪಡಪ್ಪೋಸಿ ಜೆನಂಗೊ ಹೇಳಿ ಗ್ರೈಶೇಡ ನೀನು." ಅದರ ಅಬ್ಬಗೂ ರಜಾ ಕೋಪ ಬಂತು.

"ಆ ಜುಟ್ಟು ಕಟ್ಯೊಂಡು ಇದ್ದ ಭಟ್ಟನ ಆನು ಖಂಡಿತಾ ಮದುವೆ ಆಗೆ. ಊರೂರು ತಿರಿಕ್ಕೊಂಡು ಮದುವೆ, ಉಪ್ನಾನ, ಪುಣ್ಯಾಯ, ಬೊಜ್ಜ ಶಪುಂಡಿ

ಹೇಳಿ ಇಡೀ ದಿನ ತಿರುಗ್ಗು. ಬಪ್ಪಾಗ ತಲೆಮೇಗೆ ಅಕ್ಕಿ, ತೆಂಗಿನ ಕಾಯಿಯ ಮೂಟೆ ಹೊತ್ತಂಡು ಬಕ್ಕು. ಮಂತ್ರ ಹೇಳುವಾಗ ಮಾಂತ್ರ ಊರವು ಅವ ಹೇಳಿದ ಹಾಂಗೆ ಕೇಳುದು. ಮತ್ತೆ ಅವನ ಗಣ್ಯ ಮಾಡುವವು ಆರೂ ಇಲ್ಲೆ. ಹಾಂಗಿದ್ದವನ ಮದುವೆ ಆದರೆ ಎಲ್ಲೋರು ಎನ್ನ ಭಟ್ಟನ ಹೆಂಡತಿ ಹೇಳುಗು. ಕಾಸಿನ ಮರ್ಯಾದೆಯನ್ನೂ ಕೊಡವು. ಎನ್ನ ನಿಂಗೊ ಅವಂಗೆ ಕೊಡುದೂ ಬೇಡ. ಅವನ ಕೂಸಿನ ನೋಡ್ಲೆ ಹೇಳಿ ಇತ್ಲಾಗಿ ಕರಕ್ಕೊಂಡು ಬರೇಡ ಹೇಳಿ ನರಸಿಂಮ್ಮ ಮಾವಂಗೆ ಮದಾಲು ಹೇಳಿ ಕಳ್ಸು" ಹೇಳಿತ್ತು ರತ್ನಮಾಲ.

"ನಿನಗೆ ಸೊಕ್ಕು ತಲಗೆ ಅಡರಿದ್ದು ರತ್ನ. ನಿನ್ನ ಮುಂದಕ್ಕೆ ಕಲುಶಲೆ ಕಳ್ಸೇಡಿ ಹೇಳಿ ನಿನ್ನ ಅಪ್ಪಂಗೆ ದಮ್ಮಯ್ಯ ಹಾಕಿದ್ದೆ ಅವು ಎನ್ನ ಮಾತಿನ ಗಣ್ಯ ಮಾಡಿದ್ದವಿಲ್ಲೆ. 'ಕೂಸಿಂಗೆ ಕಲಿಯೇಕು ಹೇಳಿ ಇಪ್ಪಾಗ ನೀನು ಅಡ್ಡ ಬರೇಡ. ಆನದರ ಮುಂದಕ್ಕೆ ಕಲುಶುತ್ತೆ' ಹೇಳಿ ಹಠ ಹಿಡುದವು. ಈಗ ನೋಡು ಹೇಂಗೆ ಬಿತ್ತುಕಟ್ಟಿತ್ತು ಹೇಳಿ. ಈಗ ಅನುಭವಿಸಲಿ. ಎಂತ ನಿನ್ನ ನೋಡ್ಲೆ ರಾಜಕುಮಾರ ಬಕ್ಕು ಹೇಳಿ ಜಾನ್ಸಿದೆಯೋ?" ಅಬ್ಬೆ ರಜಾ ಗರಂ ಆಗಿ ಹೇಳಿತ್ತು.

"ಎನಗೆ ಮದುವೆ ಆಗದಿದ್ದರೂ ಅಕ್ಕು ಅಬ್ಬೆ. ಆರೂ ಬಾರದಿದ್ದರೆ. ಆನು ಹೀಂಗೇ ಇಪ್ಪೆ. ಹಾಂಗೆ ಹೇಳಿ ಹೇಂಗೇಂಗೆ ಇಪ್ಪವರ ಆನು ಮದುವೆ ಆಗೆ ಖಂಡಿತ." ಮಗಳೂ ರಜಾ ಕೋಪಲ್ಲಿಯೇ ಹೇಳಿತ್ತು. ಅಂಬಾಗ ಅಬ್ಬಗೆ ನೆಂಪಾತು. "ಇವ ಬೇಡದಿದ್ದರೆ ಬೇಡ. ಮನ್ನೆ ಈಳಂತ ಕೋಡಿ ಕೇಶವ ಮಾಷ್ಟ್ರ ಮಗ ನಾರಾಯಣಂಗೊ ನಿನ್ನ ಕೇಳಿದ್ದವಡಾ. ಮಾಣಿ ಬಿ.ಎ. ಕಲ್ತುಮತ್ತೆಂತದೋ ಡಿಗ್ರಿ ಮಾಡಿ ಸರಕ್ಕಾರದ ಶಾಲೆಲಿ ಮಾಷ್ಟ್ರತ್ತಿಗೆ ಮಾಡುತ್ತಾಡ. ಬದುಕ್ಕು ಹೇಳಿ ಬೇರೆ ಎಂತದೂ ಇಲ್ಲೆಡಾ. ಸ್ವಂತಮನೆ ಇದ್ದಾಡ. ಕೈ ತುಂಬಾ ಸಂಬಳ ಬತ್ತಾಡ. 'ಎಂತ ಅವು ಕೂಸಿನ ಕೊಡುಗೊ' ಹೇಳಿ ವಿಚಾರಿಸಿದವಾಡ"

"ಅದಕ್ಕೆ ನೀನೆಂತ ಹೇಳಿದ್ದೆ?"

"ಎಂಗೊ ಸದ್ಯಲ್ಲಿ ಕೂಸಿನ ಮದುವೆ ಮಾಡುವ ಅಂದಾಜಿ ಇಲ್ಲೆ ಹೇಳಿ ಹೇಳಿ ಕಳುಸಿದ್ದೆ"

"ಎಂತಕೆ?"

"ಬರೇ ಸಂಬಳಲ್ಲಿಯೇ ಬದುಕ್ಕುದು ಕಷ್ಟ ಅಲ್ಲದೋ ಮಗಳೆ. ರಜಾದರೂ ತೋಟವು ಗದ್ದೆಯೋ ಇದ್ದವಕ್ಕೆ ನೋಡಿ ನಿನ್ನ ಕೊಡೇಕು ಹೇಳಿ ಎಂಗಳ ಆಶೆ ಹಾಂಗಾಗಿ ನಿನ್ನ ಜಾತಕ ಕೊಟ್ಟಿದ್ದಿಲ್ಲೆ"

"ಒಳ್ಳೆ ಕೆಲಸ ಮಾಡಿದ್ದಿ ಅಬ್ಬೆ. ಎನಗೂ ಮಾಷ್ಟ್ರನ ಮದುವೆ ಅಪ್ಪಲೆ ಇಷ್ಟ ಇಲ್ಲೆ"

"ಎಂತಕೆ?"

"ಮಾಷ್ಟ್ರಕ್ಕೊಗೆ ಮಕ್ಕಳ ಬಡುದು ಹೆದರ್ಸಿ ಅದೇ ಅಭ್ಯಾಸ ಅಲ್ಲದೋ. ಹಾಂಗೇ ಮನೇಲಿಯೂ ಅದೇ ಅಭ್ಯಾಸ ಅವಕ್ಕೊ ಯಾವಾಗ ನೋಡಿರೂ ಹಲ್ಲು ಕಿರಕ್ಕೊಂಡು ಮನೇಲಿ ಮಕ್ಕೊಗೊ ಬಡುಕ್ಕೊಂಡು ಹೆಂಡತಿಯ ಹೆದರ್ಸೊಂಡು ಇಪ್ಪದೇ ಅವರ ಜಾಯಮಾನ. ಒಂದು ಕಡೆಯೂ ಶಾಶ್ವತ ಊರ. ಒಂದು ಕಡೆಂದ ಇನ್ನೊಂದು ಕಡೇಂಗೆ ಪಡಿ ಬಿಡಾರ ಕಟ್ಯೊಂಡು ಹೋಕು. ಅವ ಹೋದಲ್ಲೆಲ್ಲಾ ತಿರುಗೇಕು. ಹೊತ್ತೋಪನ್ನಾರ ಅವಕ್ಕೆ ಶಾಲೆ ಕೆಲಸ ಆತು. ಮನೆಗೆ ಬಪ್ಪಾಗಳೇ ಮೂಟೆಗಟ್ಲೆ ಕಾಗದಂಗಳ ತೆಕ್ಕೊಂಡು ಬಂದು, ಅದರಲ್ಲಿಯೇ ಮೋರೆ ಹೊಗುಸೇಂಡು ಇಕ್ಕು. ಅದೆಂತದೋ ಮಕ್ಕಳ ಪರೀಕ್ಷೆ ಪೇಪರಾಡ. ಇಲ್ಲದಿದ್ದರೆ ಪ್ರಬಂಧಗೊಡ. ಅಂತೂ ಒಂದು ಮಿನಿಟೂ ಸಂಸಾರ ನೋಡ್ಯಂಬಲೆ ಪುರುಸೊತ್ತು ಇಲ್ಲದ್ದ ಪ್ರಾಣಿ ಅವ."

"ಎನಗೆ ಮಾಷ್ಟ್ರಂಗಳ ನೋಡೇಡಿ ನಿಂಗೊ, ಮದಲೇ ಹೇಳುತ್ತೆ"

"ಅಯ್ಯೊ ದರ್ವೇಶಿ, ಮಾಷ್ಟ್ರ ಅವನಷ್ಟಕ್ಕೆ ಕೆಲಸ ಮಾಡ್ಯೊಂಡು ಇದ್ದರೆ ನಿನಗೆಂತ ನಷ್ಟ"

"ನಷ್ಟ ಇದ್ದಬ್ಬೆ. ಒಂದೆರಡು ಕುರುಳಗೊ ಅದ ಮತ್ತೆ ಅವು ಕೂಗಲೆ ಕಿರುಚಲೆ ಸುರು ಮಾಡುಗು. ಇದರಂದ ಅವನ ಏಕಾಂತಕ್ಕೆ ಭಂಗ ಬಕ್ಕು. ಅಷ್ಟಪ್ಪಾಗ ಅವಂಗೆ ಕೋಪ ಬಕ್ಕು. ಮಕ್ಕಳ ಬೈವಲೆ, ಬಡಿವಲೆ ಸುರು ಮಾಡುಗು. ಅವು ಕಣ್ಣೀರು ಹಾಯ್ಕೊಂಡು ಅಬ್ಬೆ ಹತ್ರಂಗೆ ಬಕ್ಕು. ಅದರೆಲ್ಲಾ ಜಾನ್ಸಿಯೇ ಎನಗೆ ಮಾಷ್ಟ್ರ ಗಂಡ ಅಪ್ಪಲಾಗ ಹೇಳಿ ಕಂಡತ್ತು" ವಿವರಿಸಿದಳು ರತ್ನಮಾಲ.

"ನಿನ್ನದು ಭಾರೀ ದೀರ್ಘಾಲೋಚನೆ, ಮುಂದಾಲೋಚನೆ ಆತು ಮಗಳೆ. ಎನ್ನ ಮದುವೆ ಸಮಯಲ್ಲಿ ಎನ್ನ ಇದ್ದೆಯೋ ಸತ್ತಿದ್ದೆಯೋ ಹೇಳಿ ಕೇಳಿದ್ದವಿಲ್ಲೆ ಆದರೂ ಆನು ಸಂಸಾರ ಮಾಡಿದ್ದಿಲ್ಲೆಯೊ" ಸವಾಲು ಹಾಕಿತ್ತು ಸುಬ್ಬಮ್ಮ.

"ನಿಂಗೊ ಕೋಲೆ ಬಸವಂಗೊ ಹೇಳಿ ಎಂಗಳೂ ಆಯೇಕೊ? ಹೇಳಿ ಜಾನ್ಸೇಡ. ಮುಂದೆ ಹೇಂಗಿಪ್ಪ ಬದುಕ್ಕು ಬೇಕು ಹೇಳಿ ಆಲೋಚನೆ ಮಾಡೇಕು? ಸುಮ್ಮನೆ ಕುರಿಗಳ ಹಾಂಗೆ ಕಡಿವಲೆ ತಲೆ ಒಡ್ಡುಸುದಲ್ಲ" ಅಬ್ಬಗೆ ಉಪದೇಶ ಮಾಡಿತ್ತು ಮಗಳು.

"ಅಂಬಾಗ ನಿನ್ನ ಕೈಡಿವಲೆ ಆರಕ್ಕಪ್ಪಾ? ಡಾಕ್ಟ್ರಕ್ಕೊ ಅದಾದರೂ ಹೇಳು" ಸುಬ್ಬಮ್ಮಂಗೆ ಆತಂಕ ಆತು.

"ಎನಗೆ ಡಾಕ್ಟ್ರು ಬೇಡ"

"ಎಲ್ಲೋರು ಅಳಿಯ ಡಾಕ್ಟ್ರಾದರೆ ಕೈ ತುಂಬಾ ಸಂಪಾದನೆ ಮಾಡುಗು. ಹೆಂಡತಿ ಮಕ್ಕಳ ಕಾರಿಲ್ಲಿ ಮೆರವಣಿಗೆ ಮಾಡುಗು. ಹೇಳಿ ಹೆಸರು ಗೊಂತಿಲ್ಲದ್ದ ಊರಿಂಗೂ ಹುಡುಕ್ಕೊಂಡು ಹೋವುತ್ತವು."

"ಅಬ್ಬೆ ಅವಕ್ಕೆ ರಜಸಾನು ಬುದ್ಧಿ ಇಲ್ಲೆ. ಗಂಡ ಡಾಕ್ಟ್ರಾದರೆ ಹೆಂಡತಿ ಮಕ್ಕಳ ಸರಿಯಾಗಿ ನೋಡುಗು ಹೇಳುದು ಬರೀ ಕಲ್ಪನೆ ಅಷ್ಟೆ. ಅವು ನೋಡುದು ರೋಗಿಗಳ ಪೈಸೆಯ ಚೀಲವ. ಅವರ ಕೈಂದ ಎಷ್ಟು ಗುಂಜಲಕ್ಕು ಹೇಳಿ ನೋಡುದು. ಅದಕ್ಕೆ ಬೇರೆಯವರ ಕಷ್ಟ ಸುಖ ಕಾಣ. ಬರೇ ಪೈಸೆ ಮಾಡೇಕು. ಬಂಗ್ಲೆ ಕಟ್ಟೇಕು, ಕಾರು ತೆಕ್ಕೊಳೇಕು ಹೇಳುವುದರಲ್ಲಿಯೇ ಅವರ ಆಯುಶ್ಯ ಹೋವುತ್ತು. ಹಾಂಗಿದ್ದವರ ಮದುವೆ ಆಗಿ ಎಂತ ಸುಖ ಅನುಭವಿಸಲಿದ್ದು".

"ಇದೆಲ್ಲಾ ನಿನ್ನ ಕಲ್ಪನೆ ರತ್ನ. ಊರಿಲ್ಲಿಪ್ಪ ಇಷ್ಟು ಜೆನ ಡಾಕ್ಟ್ರಕ್ಕೊ ಅವರ ಹೆಂಡತಿ ಮಕ್ಕಳ ಸರಿಯಾಗಿ ನೋಡುತ್ತವಿಲ್ಲೆ ಹೇಳಿ ಅಲ್ಲದೋ ನಿನ್ನ ವಾದ. ಅಷ್ಟಕ್ಕೂ ನಿನಗೆ ಡಾಕ್ಟ್ರಕ್ಕಳ ವಿಷಯ ಎಂತ ಗೊಂತಿದ್ದು. ದೊಡ್ಡ ಪಂಡಿತನ ಹಾಗೆ ಬಾಯಿಗೆ ಬಂದ ಹಾಂಗೆ ಮಾತಾಡೇಡ. ಎನ್ನ ತಾಳ್ಮೆಗೂ ರಜಾ ಹಿಡಿತ ಇದ್ದು ಅದು ತಪ್ಪಿದರೆ ಎನಗೂ ಕೋಪ ಬಾರದ್ದಿರ!" ಎಚ್ಚರಿಸಿತ್ತು ಅಬ್ಬೆ.

"ನಿನಗೆ ಕೋಪ ಬಂದರೆ ಬರಲಿ ಅಬ್ಬೆ. ಆನು ಹೆದರುತ್ತಿಲ್ಲೆ ಎನಗೆ ಗೊಂತಿಪ್ಪದನ್ನೇ ಆನು ಹೇಳಿದ್ದು" ತರ್ಕಕ್ಕೆ ನಿಂದತ್ತು ರತ್ನ.

"ನಿನಗೆ ಗೊಂತಿಪ್ಪದು ಎಂತದು ಮಣ್ಣು?" ಅಬ್ಬಗೆ ಪಿಸುರು ಎಳಗಿತ್ತು.

"ನೀನು ಕೋಪುಸೇಡ ಅಬ್ಬ. 'ಕಂಡದರ ಕಂಡ ಹಾಂಗೆ ಹೇಳಿರೆ ಕೆಂಡದ ಹಾಂಗಿಪ್ಪ ಕೋಪ ಬಕ್ಕು' ಹೇಳುವ ಗಾದೆಯೇ ಇಲ್ಲೆಯೋ."

"ನೀನೆಂತರ ಕಂಡದು ಕೇಳಿದ್ದು?"

"ಇಲ್ಲಿ ಕೇಳಬ್ಬೆ ನಮ್ಮ ಪುಟ್ಟ ಮಾವನ ಮಗಳು ಶಾರದೆಯ ಕೊಟ್ಟದು ಎಲ್ಲಿಗೆ ಆರಿಂಗೆ ಗೊಂತಿದ್ದೊ?"

"ಗೊಂತಿದ್ದು. ಅದರ ಕೊಟ್ಟದು ಹೊನ್ನಗುಂಡಿಗಲ್ಲದೋ?

"ಅದರ ಗೆಂಡ ಡಾಕ್ಟ್ರಲ್ಲದೋ? ನೆಂಪಾತೋ"

"ಹಾಂ ಈಗ ನೆಂಪಾತು. ಅವ ಡಾಕ್ಟ್ರಾಗಿ ಗಳುಸಿದ್ದ ಎಷ್ಟು?"

"ಅವನ ಸಂಪತ್ತಲ್ಲಾ ಎನಗೆ ಹೇಳೇಕಾದ್ದು. ಅವ ಶಾರದೆಯ ಹೇಂಗೆ ನರಳುಸಿದ ಹೇಳಿ ಹೇಳೇಕಾದ್ದು."

"ಎಂತ ಮಾಡಿದ?"

"ಇಡೀ ದಿನ ಆಸ್ಪತ್ರೆಲಿ ಕೂದಂಡು ರೋಗಿಗಳ ನೋಡ್ಯಂಡು ಇತ್ತಿದ್ದ ಉದಿಯಪ್ಪಾಗ 6 ಗಂಟೆಗೆ ಮನೆ ಬಿಟ್ಟವ ಕಸ್ತಲಪ್ಪಾಗ ಒಂಭತ್ತು ಗಂಟೆಗೆ ಮನೆಗೆ ಬಂದುಕೊಂಡು ಇತ್ತಿದ್ದ. ಮನೇಲಿ ಹೆಂಡತಿ ಮಕ್ಕೊ ಇದ್ದವು ಹೇಳುವ ಕಲ್ಪನೆಯೇ ಅವಂಗೆ ಇತ್ತಿಲ್ಲೆ. ಬರೇ ಪೈಸೆ ಮಾಡುವ ಚಿಂತೆ ಒಂದೇ ಇತ್ತು ಅವನ ತಲೇಲಿ."

"ದುಡಿವ ವಯಸ್ಸಿಂಗೆ ದುಡುದರಲ್ಲದೋ ನಾಲ್ಕು ಕಾಸು ಜಮಾ ಅಪ್ಪದು. ಹಾಂಗಾಗಿ ಒಳ್ಳೆದುಡುದ. ಎಂತಾತು?"

"ಎಂತಾತು ಹೇಳೇಕೋ? ಆ ಶಾರದೆ ದಿನಂದ ದಿನಕ್ಕೆ ಬಚ್ಚಿ ಶಪಿ ಹಾಂಗಾತು. ಎದ್ದು ನೆಡವಲೂ ಎಡಿಯದ್ದಾತು. ಅಂಬಾಗ ರಜಾ ಬುದ್ಧಿ ಬಂತು ಡಾಕ್ಟ್ರಂಗೆ. ಅದರ ಕೊಡೆಯಾಲಕ್ಕೆ ಕರಕ್ಕೊಂಡು ಹೋಗಿ ದೊಡ್ಡ ಡಾಕ್ಟ್ರಂಗೆ ತೋರ್ಸಿದ. ಅಲ್ಲಿ ಎದೆಯ ಪಟತೆಗೆದಾತು. ಅದರ ನೋಡಿ ಆ ಡಾಕ್ಟ್ರು ಹೇಳಿದ. 'ಇಷ್ಟು ದಿನ ಎಂತ ಮಾಡ್ಯೊಂಡು ಇತ್ತಿದ್ದೆ. ಇದಕ್ಕೆ ಶ್ವಾಸಕೋಶದ ಕೇಂನ್ಸರು ಆಗಿ ತುಂಬಾ ದಿನ ಆತು. ಹೆಚ್ಚು ಹೇಳಿರೆ ಇನ್ನು ಆರು ತಿಂಗಳು ಬದುಕ್ಕುಗು. ಇದಕ್ಕೆ ಮದ್ದಿಲ್ಲೆ ಹೇಳಿದಾಡ' ಅವ ಹೇಳಿದ ಹಾಂಗೇ ಆತಾಡ. ಶಾರದೆ ಆರೇ ತಿಂಗಳು ಬದುಕ್ಕಿ ಸತ್ತತ್ತಾಡ"

"ಅಂಬಾಗ ಅವ ಮನೆವಕ್ಕೆ ಮದ್ದು ಕೊಟ್ಟುಗೊಂಡು ಇತ್ತಿದ್ದಾ ಇಲ್ಲೆಯೋ. ಈ ವಿಷಯ ಎನಗೆ ಗೊಂತೇ ಇಲ್ಲೆ. ನಿನಗೆ ಹೇಂಗೆ ಗೊಂತಾತು ರತ್ನ?"

"ಶಾರದೆಯ ಮನೆ ಹತ್ರಾಣದ್ದು ಯಶೋದೆ ಹೇಳಿ ಇದ್ದು. ಅದೆನಗೆ ಈ ಕತೆಯ ಹೇಳಿದ್ದು."

"ನೀನಂಬಾಗ ಹೇಳುದು ನಿಜವೇ. ಡಾಕ್ಟ್ರಕ್ಕೊ 'ಊರಿಂಗೆ ಉಪಕಾರಿಗೊ, ಮನಗೆ ಮಾರಿಗೊ' ಹೇಳಿ ಆತು. ಆನು ನೋಡಿದ್ದೆ. ಐದಾರು ಜೆನ ಡಾಕ್ಟ್ರಕ್ಕಳ

ಹೆಂಡತಿ ಮಕ್ಕೊ ಎಲ್ಲಾ ಬೇರೆಯವರ ಹತ್ರ ಮದ್ದಿಂಗೆ ಹೋದದ್ದರ. ಹಾಂಗಾರೆ ನಿನ್ನ ಒಬ್ಬ ಇಂಜಿನಿಯರಿಂಗೆ ಕೊಡುವನೋ? ಅವಂಗೂ ಕೈ ತುಂಬಾ ಸಂಬಳ ಬತ್ತು."

"ಅವ ಡಾಕ್ಟ್ರಕ್ಕಳ ಅಪ್ಪ! ಇಂಜಿನಿಯರುಗೊ ಇಪ್ಪದೆಲ್ಲಿ ಹೇಳಿ ಗೊಂತಿದ್ದೊ ನಿನಗೆ? ಅವು ಇಪ್ಪದು ಮನುಷ್ಯರಿಲ್ಲದ ಜಾಗೆಲಿ. ದೊಡ್ಡ ದೊಡ್ಡ ಸಂಕಂಗಳನ್ನೋ ಕಟ್ಟೋಣಂಗಳನ್ನೊ ಕಟ್ಟುವ ಜಾಗೇಲಿ. ಹಗಲೂ ಇರುಳೂ ದುಡುಕ್ಕೊಂಡೇ ಇಕ್ಕು. ಇಪ್ಪಲೆ ಸರಿಗಟ್ಟನ ಮನೆ ಹೇಳಿ ಇರ. ಸೋಗೆ ಹಾಕಿದ ಮನೆಯೋ, ಮೇಲಂಗೆ ತಗಡು ಹೊದೆಶಿದ ಬಿಡಾರವೋ ಇಪ್ಪದು ಅವಕ್ಕೆ. ಒಂದು ಕಡೆ ಕೆಲಸ ಮುಗುದರೆ ಕಂದಾರಿಗಳ ಹಾಂಗೆ ಬಿಡಾರವ ಇನ್ನೊಂದು ಕಡೆಗೆ ಕಿತ್ತಂಡು ಹೋವುತ್ತವು ಹೆಂಡತಿ ಮಕ್ಕಳ ಮನೇಲಿ ಬಿಟ್ಟಿಕ್ಕಿ ಹೋಕು."

"ಎಂತಕ್ಕೆ ಹೆಂಡತಿ ಮಕ್ಕೊಗೊ ಅವನೊಟ್ಟಿಂಗೆ ಇಪ್ಪಲಾಗದೋ?

"ಹಾಂಗಿದ್ದವನ ಒಟ್ಟಿಂಗೆ ಎಂತಕೆ ಇಪ್ಪದು? ಅವ ಇಪ್ಪ ಜಾಗೇಲಿ ಸರಿಯಾಗಿ ನೀರು ಸಿಕ್ಕ, ಕರೆಂಟು ಇರ. ಅತ್ತರೆ ಬಂಧು ಬಳಗದವು ಆರೂ ಇರವು. ಇಪ್ಪದು ಹಲವು ಹದಿನೆಂಟು ಜಾತಿಯವು. ಹತ್ತಾರು ಭಾಷೆಯವು. ಈ ಇಂಜಿನಿಯರುಗಳ ಮದುವೆ ಆದರೆ ಕಟ್ಯೊಂಡ ಹೆಂಡತಿ ಮನೇಲಿ ನುಸಿ ಬಡಕ್ಕೊಂಡು ಕೂರೇಕಷ್ಟೆ? ಎನಗೆ ಬೇಡಬ್ಬಾ. ಈ ಇಂಜಿನಿಯರು ಗೆಂಡ".

"ನೀನು ಸುಮಾರು ಆಲೋಚನೆ ಮಾಡ್ಯೊಂಡು ಮಡುಗಿದ್ದೆ ಹಾಂಗಾರೆ ನಿನ್ನ ಒಬ್ಬ ವಕೀಲಂಗೆ ಕೊಡುವೊ"

"ಹಾಂ ನೀನು ಹುಡುಕ್ಕಿದ ಅಳಿಯನೆ? ಆ ಲೊಟ್ಟೆ ಬುರುಕ್ಕೊಂಗೊ ಎನ್ನ ಕೊಡುದು? ಅವ ಸತ್ಯವ ಲೊಟ್ಟೆ ಹೆಳಿ ಮಾಡುನು. ಲೊಟ್ಟೆಯ ಸತ್ಯ ಹೇಳಿ ಮಾಡುಗು. ಎನಗೆ ಆತೇ ಇಲ್ಲೆ."

"ಮತ್ತಾರಪ್ಪಾ? ನಿನ್ನ ಮದುವೆ ಅಪ್ಪಾ ವರಾ. ಅದಾದರೂ ಬಾಯಿ ಬಿಡು. ಹಾಂಗಿದ್ದವನನ್ನೇ ಹುಡುಕ್ಕಿ ಮಾಡುತ್ತೆಯೋ"

ಸುಬ್ಬಮ್ಮಂಗೆ ಮಗಳವಾದ ಕೇಳಿ ಸಾಕಾತು.

"ನಿಂಗೊ ಪಿಸಿಪಿಸಿ ಮಾತಾಡುವ ಬದಲು ಎನ್ನ ಕೇಳಿದ್ದರೆ ಆನು ನೇರ ಉತ್ತರ ಕೊಡುತ್ತಿತ್ತಿಲ್ಲಿಯೋ?

"ಅಬ್ಬಾ ನೀನು ಬೆಳದು ನಿಂದದೆ? ಹೂಡ್ಸೆ ಬತ್ತಿಯೋ ಹೇಳಿ ಎತ್ತಿನ ಹತ್ರೆ ಆರಾದರೂ ಕೇಳುತ್ತವೋ? ಬಳ್ಳಿ ಹಾಕಿ ಎಳದು ನೊಗವ ಕೊರಳಿಂಗೆ ಕಟ್ಟಿದರೆ ಮಾಂತ್ರ ಹೊಡ್ಸ್ಯೊಂಡು ಹೋಕು. ಹಾಂಗೇ ಕೂಸುಗಳ ಕೇಳಿ ಆರಾದರೂ ಮದುವೆ ಮಾಡುತ್ತವೋ. ಹಿಡುದು ಮದುವೆ ಮಾಡಿ ಕೊಟ್ಟರೆ ಗೆಂಡನೊಟ್ಟಿಂಗೆ ಹೋಕು. ಮುಂದೆ ತಾನೇ ಸಂಸಾರ ನಿರ್ವಹಣೆ ಮಾಡುಗು. ಎಂಗಳೆಲ್ಲಾ ಹಾಂಗೇ ಕೊಟ್ಟದಲ್ಲದೋ? ಎಂಗೋ ಎಂತ ಬದುಕ್ಕಿ ಬಾಳಿದ್ದಿಲ್ಲಿಯೋ?"

"ಆ ಕಾಲ ಎಲ್ಲಾ ಮುಗುತ್ತು ಅಬ್ಬೆ. ಈಗಾಣ ಕೂಸುಗೋಗೆ 'ಗೆಂಡ, ಗೆಂಡನ ಮನೆ ಹೇಂಗಿರೇಕು." ಹೇಳುವ ಕಲ್ಪನಗೊ ಇರುತ್ತು?

'ಹಾಂಗಾರೆ ನಿನ್ನ ಕಲ್ಪನೆಯ ಒಂದಾರಿ ಹೇಳು" ಸುಬ್ಬಮ್ಮನ ದನಿಯಲ್ಲಿ ಆತಂಕ ಮೂಡಿತು."

"ಹೇಳುತ್ತೆ ಕೇಳು. ಎನ್ನ ಗೆಂಡ ಅಪ್ಪವ ಬಿ.ಎ. ವರಗಾದರೂ ಕಲ್ತಿರೇಕು. ಆದರೆ ಅವ ಅಲ್ಲಿ ಇಲ್ಲಿ ಸಂಬಳಕ್ಕೆ ಚಾಕ್ರಿಗೆ ಹೋಪಲಾಗ. ಅವ ಪೂರ್ತಿ ಬೆಳ್ಳಂಗೆ ಬಿಳಿ ಜೆರಳಿ ಹಾಂಗೆ ಇಪ್ಪಲಾಗ. ಕಪ್ಪಾಗಿ ಕಾಕೆ ಬಣ್ಣವೂ ಇಪ್ಪಲೆಡಿಯ. ಕಪ್ಪೂ ಬಿಳಿಯೂ ಮಿಶ್ರ ಬಣ್ಣದವ ಆಗಿರೇಕು. ಮನೇಲಿ ಉಂಬಲೆ ತಿಂಬಲೆ ಸರಿಯಾಗಿ ಇರೇಕು. ತಕ್ಕ ಮಟ್ಟಂಗೆ ಅಡಕ್ಕೆ ತೋಟ, ಭತ್ತ ಬೆಳವ ಗೆದ್ದೆ ಇರೇಕು. ಮನೇಲಿ ಅತ್ತೆ ಮಾವ ಇಬ್ರೂ ಇರೇಕು."

"ಎಂತಕೆ ಅವಿದ್ದರೆ ನಿನಗೆ ತೊಂದರೆ ಅಲ್ಲದೋ? ಈಗಾಳ ಕೂಸುಗೋಕ್ಕೆ ಅತ್ತೆ ಮಾವನ ಕಂಡಾರಾಗ ಅದಕ್ಕೆ ಕೇಳಿದ್ದು"

"ಅವು ಹೆಡ್ಡುಗೊ ಅಬ್ಬೆ. ಅತ್ತೆ ಮಾವ ಮನೇಲಿದ್ದರೆ– ಮಗಂಗೂ ಸೊಸಗೂ ಮನೆ ಬಿಟ್ಟು ಹೋಪಲಿಕ್ಕು. ಮುಂದೆ ಅವಕ್ಕೆ ಮಕ್ಕೊ ಆದರೆ ಸೊಂಟಲ್ಲಿ ಎತ್ತಿಗೊಂಡು, ಹತ್ರೆ ಮನಿಶ್ಯೊಂಡು ಸರಿಯಾಗಿ ನೋಡುಗು. ಕೂಸಿಂಗೆ ಸರಿಯಾಗಿ ಗೊಂತಿಲ್ಲದಿದ್ದರೆ ಆಚಾರ ವಿಚಾರ ಎಲ್ಲಾ ಹೇಳಿಕೊಡುಗು. ಹೆರಿ ಜೀವಂಗೊ ಮನೇಲಿ ಇದ್ದರೆ ಒಳ್ಳೆದು."

"ಮತ್ತೆಂತೆಲ್ಲಾ ಇರೇಕು" ಅಬ್ಬಗೆ ರಜಾ ಉತ್ಸಾಹ ಬಂತು.

"ಅವ ಹೆಂಡತಿ ಮಕ್ಕಳ ಸರಿಯಾಗಿ ನೋಡ್ಯೋಳೇಕು. ಅಡಕ್ಕೆ ತೋಟಕ್ಕೆ ಹೋಪಾಗ ಮಕ್ಕಳನ್ನು ಕರಕ್ಕೊಂಡು ಹೋಯೇಕು. ಅವರ ಪ್ರೀತಿಲಿ ನೋಡೇಕು. ಅವಕ್ಕೆ ಅವಶ್ಯ ಇದ್ದರೆಲ್ಲಾ ತಂದು ಕೊಡೇಕು. ಅನುಪಥ್ಯಂಗೋಕೆಲ್ಲಾ ಹೋಪಾಗ

ಅವ ಬೆಳಿ ಧ್ಯೋತಿ ಸುತ್ತ್ಯೊಂಡು ಹೆಗಲಿಂಗೊಂದು ಕಂಬಿ ಇಪ್ಪ ಶಾಲಿನ ಹಾಕ್ಯೊಂಡು, ಮೋರಗೆ ಕುಳದ ಬೊಟ್ಟು ಹಾಕ್ಯೊಂಡು; ಹೆಂಡತಿ ಮಕ್ಕಳ ಕರಕ್ಯೊಂಡು ಹೋಯೇಕು. ಅಲ್ಲಿದ್ದವರ ಹತ್ರೆ ಎಲ್ಲಾ ನೆಗೆ ಮಾಡ್ಯೊಂಡು ಮಾತಾಡೇಕು. ಗುರ್ತ ಇದ್ದವರ ಮನೆಗೆ ಬನ್ನಿ ಹೇಳಿ ಪ್ರೀತಿಲಿ ದನಿಗೇಳೇಕು. ಬೇರೆವರಕ್ಕೆ ತನ್ನಿಂದಾದ ಸಹಾಯ ಮಾಡೇಕು."

"ಸಾಕು ಮಗಳೆ, ನಿನ್ನ ವಿವರಣೆ. ಎನಗೆ ಎಲ್ಲಾ ಅರ್ಥ ಆತು. 'ಎಲಿ, ಹೆಗ್ಗಣವನ್ನೇ ಮದುವೆ ಆವುತ್ತೆ ಹೇಳಿದ ಗಾದೆ ಹಾಂಗಾತು ಎನಗೆ. ಒಟ್ಟಾರೆ ನಿನಗೆ ಮನೇಲಿಪ್ಪ ಮಾಣಿಯನ್ನೇ ನೋಡೇಕು ಹೇಳಿ ಅರ್ಥ ಆತು ಎನಗೆ. ಹಾಂಗಿಪ್ಪ ಮಾಣ್ಯಂಗೊ ನಮ್ಮ ಹವೀಕರಲ್ಲಿ ಬೇಕಾದಷ್ಟು ಜೆನ ಇದ್ದವು. ನಿನ್ನ ಅಪ್ಪಂಗೆ ಹಾಂಗಿದ್ದವರನ್ನೇ ಹಡುಕ್ಕಲೆ ಹೇಳುತ್ತೆ ಆತು"

"ಅದೆಲ್ಲಾ ಬೇಡ ಅಬ್ಬೆ. ನಿಂಗೊ ಬಡಗ ಮೂಲಗೆ ಹೋಗಿ ಅಲ್ಲಿ ಸುಬ್ರಾಯ ಮಾವನ ಮಗ ಗೋವಿಂದನ ವಿಚಾರ್ಸಿ" ರತ್ನಮಾಲಾನೇ ಸೂಚನೆ ಕೊಟ್ಟಿತ್ತು.

"ಅವ ಒಪ್ಪುಗೋ. ಅವು ಬೇಕಾದಷ್ಟು ಬದುಕ್ಕು ಇದ್ದವು. ನಮ್ಮ ಹಾಂಗಿದ್ದ ಪಾಪದವರ ಮನೇಂದ ಮದುವೆ ಅಕ್ಕೊ?

"ಅಕ್ಕು. ಅಪ್ಪ ಹೋಗಿ ವಿಚಾರ್ಸಲಿ."

"ನೀನು ಇಷ್ಟು ಗೇರಂಟಿ ಹೇಳುತ್ತೆನ್ನೆ. ಅವನ ನಿನಗೆ ಗೊಂತಿದ್ದೊ"

"ಗೊಂತಿದ್ದು ಅಬ್ಬೆ. ಅವ ಎನ್ನ ಕ್ಲಾಸಿಲ್ಲಿ ಕಲ್ತೊಂಡು ಇತ್ತಿದ್ದ. ಅಲ್ಲಿ ಇಲ್ಲಿ ಕಾಂಬಲೂ ಸಿಕ್ಕಿದ್ದ. ಅವನೇ ಹೇಳಿದ್ದು 'ರತ್ನ ಎನಗೆ ನಿನ್ನ ಮದುವೆ ಅಪ್ಪಲೆ ಮನಸ್ಸಿದ್ದು. ನೀನು ನಿನ್ನ ಅಪ್ಪಂಗೆ ಹೇಳಿ, ಎಂಗಳ ಮನೆಗೆ ಕಳುಸು ಹೇಳಿ'

"ಇಷ್ಟೆಲ್ಲಾ ನೆಡದ್ದೊ? ಅಲ್ಲಿಗೆ ಹೋಪಾಗ ಅವನ ಅಪ್ಪ ಬೇಡ ಹೇಳಿರೆ' ಆತಂಕ ಆತು ಸುಬ್ಬಮ್ಮಂಗೆ"

"ಅವನ ಅಪ್ಪಂಗೂ ವಿಷಯ ಎಲ್ಲಾ ಗೊಂತಿದ್ದು. ಅಬ್ಬೆಯೂ ಎನ್ನ ಎಷ್ಟೋ ಸರ್ತಿ ನೋಡಿದ್ದು. ಆ ಕೂಸಾದರೆ ಅಕ್ಕು ಮಗಾ. ನಮ್ಮ ಮನೆಗೆ ಒಗ್ಗುಗು' ಹೇಳಿ ಹೇಳಿದ್ದವಾಡ"

"ಇನ್ನು ಒಳದ್ದು ಎಂತದಿದ್ದು. ಎಲ್ಲಾ ನೀನೇ ಮುಗುಶಿದ್ದೆ'

ಒಳುದ್ದು ಅಬ್ಬೆ. ಒಂದಾರಿ ಅಪ್ಪ ಅತ್ಲಾಗಿ ಹೋಗಿ ಬರಳಿ. ಮದುವಗೆ ಮುಹೂರ್ತ ಕೇಳಿ ಬರಳಿ. ಯಾವುದಾದರೂ ಒಳ್ಳೆ ಮುಹೂರ್ತದಲ್ಲಿ ಎನ್ನ ಧಾರೆ ಎರದು ಕೊಡಿ ಆನು ಸಂತೋಷಲ್ಲಿ ಗೆಂಡನ ಮನೆಗೆ ಹೋಪೆ" ಹೇಳಿ ರತ್ನಮಾಲಾ ಅಲ್ಲಿಂದ ಎದ್ದಿಕ್ಕಿ ಹೋತು.

ಸುಬ್ಬಮ್ಮಂಗೂ ಸಂತೋಷ ಆತು. ಆ ಮನಗಾದರೆ ರತ್ನನ ಕಣ್ಣು ಮುಚ್ಚಿ ಕೊಡ್ಳಕ್ಕು ಕೂಸು ಸುಖಲ್ಲಿ ಇಕ್ಕು ಹೇಳಿ ಮನಸ್ಸಿಲ್ಲಿ ಜಾನ್ಸಿತ್ತು. ಕೂಡ್ಳೆ ಗೆಂಡನ ಹತ್ರೆ ಹೋಗಿ ಸಮಾಚಾರವ ತಿಳುಶಿತ್ತು. ಅದರ ಅಪ್ಪಂಗೂ ಸಂತೋಷ ಆತು. 'ಆನು ನಾಳಂಗೆ ಅಲ್ಲಿಗೆ ಹೋಯ್ಕೊಂಡು ಬತ್ತೆ. ಅದು ಒಳ್ಳೆ ಕುಳ. ಜೆನಂಗಳೂ ಒಳ್ಳೇವೇ.'

ರತ್ನಮಾಲನ ಧಾರಾಳ ಕೊಡ್ಳಕ್ಕು ಹೇಳಿ ತೀರ್ಮಾನ ಮಾಡಿದ. ಮರುದಿನವೇ ಬಡಮೂಲಗೆ ಹೋಗಿ ವಿಚಾರ್ಸೊಂಡು ಬಂದ. ಮನೆ ಮುಂದೆ ದೊಡ್ಡ ಚಪ್ಪರ ಹಾಕಿ ಗಡದ್ದಿಲ್ಲಿ ಕೂಸಿನ ಧಾರೆ ಎರದು ಕೊಟ್ಟು ಎಲ್ಲೋರಿಂದಲೂ 'ಸೈ' ಹೇಳ್ಸಿಗೊಂಡ. ಇಲ್ಲಿಗೆ ರತ್ನಮಾಲನ ವರಾನ್ವೇಷಣೆಯ ಕತೆ ಮುಗುದತ್ತು. ಹೇಂಗಿತ್ತು ಕತೆ?

O

# ಎಂಕಿಯ ದಿಬ್ಬಾಣ

ಎಂಕಿಗೆ ಹೊತ್ತು ಹೋವುತ್ತೇ ಇಲ್ಲೆ. ಗಳಿಗ್ಗೆಗೊಮ್ಮೆ ಮನೆಂದ ಹೊರಬಂದು ಗೋಣಿತ್ತಿ ಎಕ್ಕಳಿಸಿ ದಾರಿ ಕಡೆ ನೋಡ್ಳೆ ಸುರು ಮಾಡಿತ್ತು. ಎಂಕಿಯ ಅವಸ್ಥೆ ಕಂಡು ಅದರಬ್ಬೆ ಸಾವಿತ್ರಿ

"ಎಂತ ಎಂಕಿ ಆಗಿಂದ ಪುಣುಗು ಪುಚ್ಚೆ ಹಾಂಗೆ ಒಳವೂ ಹೆರವೂ ತಿರುಗುತ್ತಾ ಇದ್ದೆ. ಎಂತಾಯಿದು ನಿನಗೆ" ಹೇಳಿ ಕೇಳಿತ್ತು.

"ಎಂತದೂ ಇಲ್ಲೆಬ್ಬೆ. ಇಂದು ಶಾರದೆ ಅತ್ತಿಗೆ ಬತ್ತೆ ಹೇಳಿ ಹೇಳಿ ಕಳುಹಿಸಿದ್ದಲ್ಲದೋ; ಅದಕ್ಕಿಂದು ರಜೆ ಇದ್ದಾಡ ಏಕೆ ಬಯಿಂದಿಲ್ಲೆ ಹೇಳಿ ದಾರಿ ನೋಡುದು ಆನು!"

"ಓ ಅಷ್ಟಕ್ಕೂ ಈ ತಿರುಗಾಟ. ಒಳ್ಳೆ ಬೇನೆ ಎದ್ದ ಬಸರಿ ಹಾಂಗೆ ತಿರುಗುತ್ತೆ; ಎಂತಾತಪ್ಪಾ ಹೇಳಿ ಜಾನ್ಸಿದೆ. ಅಲ್ಲಾ ಗೆಂಡ ಬಪ್ಪಸಾರಿ ಕಾಯುತ್ತಿಯೋ ಹೇಳಿ ಕಂಡತ್ತು"

"ಎಂತಬ್ಬೆ, ನೀನೂ ಎನ್ನ ತಮಾಶೆ ಮಾಡುದೋ? ಅವು ಈಗ ಬಪ್ಪದು ಹೆಂಗೆ? ಎನ್ನ ದಿಂಡಿನ ಹೋಮಕ್ಕಪ್ಪಗ ಬಪ್ಪದು ಹೇಳಿ ಅಲ್ಲದೊ ನಿಂಗೋ ನಿಶ್ಚಯ ಮಾಡಿದ್ದು? ಆನಿನ್ನೂ ಹೆರಗಿದ್ದು ಕೂರೇಕಷ್ಟೆ ಇನ್ನು ಇಪ್ಪತ್ತು ದಿನ ಆದರೂ ಬೇಡದೋ?

"ಎಂಗೊ ನಿಶ್ಚಯ ಮಾಡಿದ್ದಪ್ಪು. ಆದರೂ ನಿಂಗೊ ಈಗಾಣ ಕಾಲವಲ್ಲದೋ? ಒಳಾಂದೊಳ ಎಂತ ಗುಸುಗುಸು ಮತಾಡಿದ್ದಿರೋ ಆರಿಂಗೆ ಗೊಂತು?"

"ಎಂಗೊ ಎಂತದೂ ಮಾತಾಡಿದ್ದಿಲ್ಲೆ. ಮಾತಾಡ್ಲೆ ಅರೆಗಳಿಗೆ ನಿಂಗೊ ಬಿಟ್ಟರಲ್ಲದೋ?

"ಹಾಂಗೆಲ್ಲಾ ಬಿಡುವ ಕ್ರಮ ಹೇಳಿ ಇಲ್ಲೆ. ನಾವು ಹಿರಿಯೋರು ಹೇಳಿಕೊಟ್ಟ ದಾರಿಲೇ ನಡೇಕು. 'ತಾಳಿದವನು ಬಾಳಿಯಾನು' ಹೇಳುವ ಗಾದೆ ಹಾಂಗೆ ಇನ್ನೆಷ್ಟು ದಿನ ಕಾಯ್ವಲಿದ್ದು? ಇನ್ನೊಂದು ತಿಂಗಳೊಳ ನಿನ್ನ ಕರಕ್ಕೊಂಡು ಹೋಕು."

"ಎಂತಬ್ಬೆ ಆನು ಬೇಗನೆ ಹೋಯೇಕು ಹೇಳಿಯೋ ನಿನ್ನ ಪೀಠಿಕೆ?

"ಹಾಂಗಲ್ಲ ಮಗಳೆ 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ', ಹೇಳುವ ಗಾದೆಯೇ ಇಲ್ಲೆಯೋ. ಇಂದಲ್ಲ ನಾಳೆ ನೀನು ಅಲ್ಲಿಗೇ ಸೇರೇ ಕಾದ್ಸಲ್ಲದೋ"

"ಹೇಳಿರೆ ಇಂದಿಂದ ಆನು ಈ ಮನೆಗೆ ಹೆರಾಣದ್ದು ಹೇಳಿಯೊ ಅರ್ಥ ಅಬ್ಬೆ?"

"ಅಪ್ಪು. ಎಂಕಿ ಯಾವಾಗ ಎಂಗೊ ತುಳಸಿ, ಎಲೆ ಮಡುಗಿ ನಿನ್ನ ಧಾರೆ ಎರದು ಕೊಟ್ಟತ್ತೋ ಅಂದೇ ಈ ಮನೆಗೂ ನಿನಗೂ ಋಣ ಸಂದತ್ತು ಹೇಳಿ ಲೆಕ್ಕ ; ನೀನು ಬೇರೆಯವರ ಸೊತ್ತಾದೆ. ಎಂಗೊ ಹೆತ್ತು ಬೆಳಸಿ, ಸಾಂಕಿ ಸಲಹಿ ಮಾಡಿದ್ದೇ ಬಂತು. ಇನ್ನು ಎಂಗೊಗೆ ನಿನ್ನ ಮೇಗೆ ಯಾವ ಹಕ್ಕೂ ಇಲ್ಲೆ. ಅದಕ್ಕದ ಧಾರೆ ಎರೆದು ಕೊಡುವಾಗ ಎಂಗಳ ಎದೆ ಸಿಗುದು ಬಂದ ಹಾಂಗೆ ಅಪ್ಪದು. ಕಣ್ಣೀರು ಕೋಡಿ ಆಗಿ ಹರಿವದು. ಎಂತ ಮಾಡುದು? ಹುಟ್ಟಿದ ಕೂಸು ಪರರ ಸೊತ್ತು ಹೇಳಿ ಗೊಂತಿದ್ದಂಡೇ ಸಾಂಕಿ ಬೆಳಶುದು" ಇಷ್ಟು ಹೇಳುವಾಗ ಸಾವಿತ್ರಕ್ಕನ ಕಣ್ಣಲ್ಲಿ ಮತ್ತೆ ನೀರು ಸುರುದತ್ತು ಸೆರಗಿಲ್ಲಿ ಒರಸಿಕೊಂಡತ್ತು.

"ಅದರೆಲ್ಲಾ ಜಾನ್ಸಿ ಈಗೆಂತಕೆ ಕೊರಗುತ್ತೆ ಅಬ್ಬೆ. ಎಲ್ಲಿದ್ದರೂ ಹೇಂಗಾದರೂ ಆನು ನಿಂಗಳ ಮಗಳೇ ಅಲ್ಲದೋ? ಆನು ಅಂಬಾಗಂಬಾಗ ಬಂದು ನಿಂಗಳ ನೋಡಿಕ್ಕಿ ಹೋಪೆ. ಎನಗೂ ನಿಂಗಳ ಬಿಟ್ಟು ಹೆಚ್ಚು ದಿನ ಇಪ್ಪಲೆಡಿಯ. ಅಸಕ್ಕಲ್ಲಿ ಸಾಯುವೆ."

"ಅಂಬಾಗಂಬಾಗ ಬಪ್ಪಲೆ ಅದು ಹತ್ರಾಣ ದಾರಿಯೋ ಮಗಳೇ ನಮ್ಮದು ಕುಂಬ್ಳೆ ಸೀಮೆ. – ನಿನ್ನ ಕೊಟ್ಟದು ವಿಟ್ಲ ಸೀಮೆಗೆ. ಕಣ್ಣೆತ್ತದ್ದ ರಾಜ್ಯಕ್ಕೆ. ಎಲ್ಲಾದರೂ

ವರ್ಷಂಕ್ಕೊಂದಾರಿ ನಿನ್ನ ಮೋರೆ ಕಾಂಬಲೆ ಸಿಕ್ಕುತ್ತೋ ಇಲ್ಲೆಯೋ ಹೇಳಿ ಜಾನ್ಸು ವಾಗಲೇ ಗಂಟ್ಳಲ್ಲಿ ಅಶನ ನೀರು ಇಳಿತ್ತಿಲ್ಲೆ. ನಿನ್ನ ಅಪ್ಪಂಗೆ ದಮ್ಮಯ್ಯ ಹಾಕಿ ಹೇಳಿದ್ದೆ. ಕಣ್ಣೆತ್ತದ್ದ ರಾಜ್ಯಕ್ಕೆ ಕೊಡೇಡಿ ಕೂಸಿನ ಹೇಳಿ. ಅವೆಲ್ಲಿ ಕೇಳುತ್ತವು ಎನ್ನ ಮಾತಿನ! ಅಲ್ಲಿಗೆ ಹೋಗಿ ಮದುವೆ ನಿಶ್ಚಯ ಮಾಡಿ ಮೂರ್ತ ಎತ್ತಿಕ್ಕಿಯೇ ಬಯಿಂದವು" ಮತ್ತೊಂದಾರಿ ಕಣ್ಣೊರಸಿತ್ತು ಸಾವಿತ್ರಕ್ಕ.

"ನೀನು ಸುಮ್ಮನೆ ಕೂರು ಸಾವಿತ್ರಿ. ಮಗಳ ಎಲ್ಲಿಗೆ ಕೊಡೇಕು ಬಿಡೇಕು ಹೇಳಿ ಎನಗೆ ಗೊಂತಿದ್ದು. ಇಲ್ಲೇ ಸುತ್ತು ಸುಳುದ್ದು ಸಾಕು. ಕಾನಂದ ಎಡನ್ನಾಡಿಂಗೆ – ಎಡನಾಡಿಂದ ಕಾನಕ್ಕೆ ಸೋದರತ್ತೆಯ ಮಗಂಗೆ ಮಗಳ ಕೊಟ್ಟಿತ್ತು. – ಅತ್ತೆಯ ಮಗಳ ಮಗಂಗೆ ತಂದತ್ತು – ಇದೇ ನೆಡದ್ದು ನಮ್ಮ ಹೆರಿಯರ ಕಾಲಂದಲೂ ಬೇರೆ ಊರು ಇದ್ದು, ಮನುಷ್ಯರು ಇದ್ದವು. ಹೇಳುವ ಪರಿಜ್ಞಾನವೂ ಇಲ್ಲೆ ನಂಗೊಗೆ. ಹೊಸ ಸಂಬಂಧ ಮಾಡ್ಯೋಳೇಕು, ಬುಡ ಬದಲಾಯೇಕು ಹೇಳುವ ಬುದ್ಧಿಯೂ ನಿಂಗೊಗೆ ಇಲ್ಲೆ. ಆನು ಕೂಸಿನ ಮನೆಯ, ಮನೆಯವರ, ಮಾಣಿಯ ಎಲ್ಲಾ ನೋಡಿಕ್ಕಿ ಬಯಿಂದೆ. ಎನಗೆ ಎಲ್ಲವೂ ಖುಷಿ ಆಯಿದು ಇಲ್ಲಿಗೆ ಕೊಟ್ರೆ ಮಗಳು ಸುಖಲ್ಲಿ ಇಕ್ಕು ಹೇಳುವ ಧೈರ್ಯವೂ ಬಯಿಂದು. ಹಾಂಗಾಗಿಯೇ ಕೂಸಿನ ಕೊಡ್ತೆ ಹೇಳಿಕ್ಕೆ ಬಂದದು" ಹೇಳಿ ಎನ್ನ ಅಮರ್ಸಿದವು.

"ಅಪ್ಪ ಹೇಳಿದ್ದು ಒಂದು ಲೆಕ್ಕಲ್ಲಿ ಸರಿ ಅಬ್ಬೆ. ಸುಟ್ಟು ಮುಡಿಗೆ ಹೋದಿಪ್ಪಾಗ ನೀನೇ ನೋಡಿದ್ದೆ ಎನ್ನ ಕೊಟ್ಟ ಮನೆಯ. ಎರಡು ಅಂತಸ್ತಿನ ಹಂಚಿನಮನೆ. ಕಿಟಿಗೋಕ್ಕೆಲ್ಲಾ ಬಣ್ಣ ಬಣ್ಣದ ಕಾಜುಗೋ. ಮನೆಗೆ ಎಲ್ಲಾ ಕಡೆ ಕೆಂಪು ಸಿಮೆಂಟಿನ ಸಾರಣೆ. ಫಳ ಫಳ ಹೊಳೆತ್ತು ಹತ್ತು ಮುಡಿ ಬತ್ತ ಹರಗುವಷ್ಟು ದೊಡ್ಡ ಜಾಲು, ಜಾಲಿನ ಸುತ್ತಲೂ ಪಾಗರ ಹಾಕಿದ್ದವು. ಒಳ ಹೋಪಲೆ ಒಂದು ಹೆಬ್ಬಾಗಿಲು – ತೋಟಕ್ಕೆ ಹೋಪಲೆ ಒಂದು ಬಾಗಿಲು – ನೀನೇ ನೋಡಿದ್ದೆನ್ನೆ; ಹೆಬ್ಬಾಗಿಲು ತೆರೆಯದ್ದೆ ವಿನಹಾ ಒಂದು ಹಾತಗೂ ಒಳ ಬಪ್ಪಲೆ ಸಾಧ್ಯ ಇಲ್ಲೆ. ಹಾಂಗಿದ್ದು ಅಲ್ಲದೋ!"

"ಅದೆಲ್ಲಾ ಅಪ್ಪು ಮಗಳೇ ಅಲ್ಲಾ ಹೇಳುತ್ತಿಲ್ಲೆ. ನಮ್ಮ ಎಡನ್ನಾಡು, ಕಾನಲ್ಲಿ ದುರ್ಬೀನು ಹಿಡಿದು ನೋಡಿದರೂ ಹಾಂಗಿಪ್ಪ ಒಂದು ಮನೆ ಕಾಂಬಲೆ ಸಿಕ್ಕ. ನಮ್ಮಲ್ಲಿ ಹೆಚ್ಚು ಇಪ್ಪದು ಮುಳಿ ಮನೆಯೇ. ದೃಷ್ಟಿ ತೆಗವ ಹಾಂಗೆ ಒಂದೆರಡು ಹಂಚಿನ ಮನೆಗೂ ಅಷ್ಟೇ!

"ಅವಕ್ಕೆ ಬೇಕಾದಷ್ಟು ಬದುಕ್ಕೂ ಇದ್ದಬ್ಬೆ. ವರ್ಷಕ್ಕೆ ಹನ್ನೆರಡು ಖಂಡಿ ಅಡಕ್ಕೆ ಹತ್ತು ಖಂಡಿ ಏಲಕ್ಕಿ, ನೂರಿಪ್ಪತ್ತು ತೆಂಗಿನಮರ, ತೋಟ ತುಂಬಾ ಬಾಳೆ

ಗಿಡುಗೂ ಒಂದು ಅಡ್ಕ ಪೂರ್ತಿ ಕಳಿಮಾವಿನ ಸೆಸಿಗೂ-ಇನ್ನೆಂತ ಬೇಕಬ್ಬೆ? ಹಟ್ಟಿ ತುಂಬಾ ಕರವ ದನಗೊ ಇದ್ದವು. ಮನೆ ಚಾಕ್ರಿಗೆ ಬೇಕಾದ ಆಳು ಕಾಳುಗೊ ಇದ್ದವು. ಇನ್ನೆಂತಾಯೇಕು ಅಬ್ಬೆ."

"ನೀನು ಹೇಳಿದ್ದೆಲ್ಲಾ ನಿಜವೇ ಮಗಳೇ! ಅಲ್ಲ ಹೇಳಿ ಹೇಳುತ್ತಿಲ್ಲೆ. ಆದರೂ ಕಣ್ಣರಸುವಾಗ ಒಂದಾರಿ ನೋಡಿಕ್ಕುವೆ ಹೇಳಿ ಕಾಂಬಲಿದ್ದೊ! ಎನ್ನ ಮದುವೆ ಆಗಿ ಇಂದಿಗೆ ಇಪ್ಪತ್ತು ವರ್ಷ ದಾಂಟಿತ್ತು. ಈಗಳೂ ಅಜ್ಜಿಯ ನೋಡೇಕು ಹೇಳಿ ಆದರೆ ಪಸಕ್ಕನೆ ಹೋಗ್ಯೊಂಡು ಬತ್ತೆ. ಆ ಭಾಗ್ಯ ನಿನಗಿದ್ದೊ? ಉದಿಯಪ್ಪಾಗ ಹೋಗಿ ಕಸ್ತಲಾಯೇಕಾರೆ ಮನೆಗೆ ಎತ್ತುತ್ತೆ. ನಿನ್ನ ಪರಿಸ್ಥಿತಿ ಹಾಂಗಿದ್ದೊ? ಇಲ್ಯಾದರೆ ನಿನಗೆ ಅಬ್ಬೆ, ದೊಡ್ಡಬ್ಬೆ, ದೊಡ್ಡಪ್ಪ, ಮಾವ ಅಳಿಯ ಹೇಳಿ ಬಂಧು ಬಳಗ ಹತ್ತರೆ ಇರ್ತ್ಯವು? ಕಷ್ಟ ಸುಖಕ್ಕೆ ಬತ್ತವು"

"ಅದೋ ಒಂಟಿ ಮನೆ. ಸುತ್ತುಮುತ್ತು ನರಹುಳುಗಳ ಕಂಡಿದಿಲ್ಲೆ. ಎಂತಾರೂ ಬೇಕಾರೆ ಹರದಾರಿ ದೂರ ಹೋಯೇಕು? ಬಾಯಿ ಬಿಟ್ಟು ಕಷ್ಟ ಸುಖ ಹೇಳ್ಯೊಂಬಲೆ ಆರಾದರೂ ಇದ್ದವೊ?"

"ಎಂತಬ್ಬೆ ಅಲ್ಲಿಯೂ ಮನುಷ್ಯರೇ ಅಲ್ಲದೋ ಇಪ್ಪವು? ಅವು ಬದುಕ್ಕುತ್ತವಿಲ್ಲೆಯೋ? ಅವೂದೆ ಎನ್ನ ಹಾಂಗೆ ಅಬ್ಬೆ ಅಪ್ಪನ ಬಿಟ್ಟಿಕ್ಕಿ ಬಂದವೇ ಅಲ್ಲದೋ? ರಜಾ ಸಮಯ ಅಸಕ್ಕ ಅಕ್ಕು ಮತ್ತೆಲ್ಲಾ ಹೊಂದಾಣಿಕೆ ಅಕ್ಕಬ್ಬೆ. ನೀನು ಎನ್ನ ವಿಷಯಲ್ಲಿ ಹೆಚ್ಚು ತಲೆಬೆಶಿ ಮಾಡ್ಯೋಳೇಡ ಆನು ಹೇಂಗಾದರೂ ಅವರೊಟ್ಟಿಂಗೆ ಹೊಂದ್ಯೊಂಡು ಬದುಕ್ಕುವೆ ಆತೊ?"

"ನೀನು ಒಂದೇ ಕೂಸು ಹೇಳಿ ನಿನ್ನ ಕೊಂಡಾಟಲ್ಲಿ ಬೆಳಸಿದ್ದೆಯೊ. ನೀನು ಬೇಡಿದ್ದರ ಹೇಳಿದ್ದರ ಎಂಗಳ ಶಕ್ತಿ ಮೀರಿ ಕೊಟ್ಟಿದೆಯಾ. ನಿನ್ನಷ್ಟು ನಿನ್ನ ತಮ್ಮ ಶ್ಯಾಮನ ಎಂಗೊ ನೋಡಿದ್ದಿಲ್ಲೆಯೋ? ಅವ್ವ ಎಷ್ಟಾದರೂ ಮಾಣಿ ಎಂಗಳ ಕಣ್ಣೆದುರೇ ಇಪ್ಪವ. ಎಂಗಳ ಕರ್ಮ ಹಿಡಿವಲೆ ಇದ್ದವ ಹೇಳಿ ಆದರೂ ಅವಂದ ಹೆಚ್ಚು ನಿನ್ನ ನೋಡಿದ್ದೆಯೋ"

"ಅದರೆಲ್ಲಾ ಆನು ಎಂದಿಗೂ ಮರೆಯೆ ಅಬ್ಬೆ. ನಿಂಗೊ ಅನುಮಾನ ಮಡುಗೇಡಿ ಹೆತ್ತ ಋಣವ ಆನು ಆದಷ್ಟು ತೀರ್ಸುವೆ. ನಿಂಗೊ ಎನ್ನ ಎಷ್ಟು ಪ್ರೀತಿಲಿ ಸಾಂಕಿದ್ದಿ ಹೇಳುದು ಎನ್ನ ಎದಲೇ ಇದ್ದು ಅಬ್ಬೆ. ನಿಂಗೊ ಎಷ್ಟು ಕಷ್ಟ ಬಂದರೂ ಎನಗಾಗಲೀ ತಮ್ಮ ಶ್ಯಾಮಂಗಾಗಲೀ ರಜವೂ ಕಮ್ಮಿ ಆಗದ್ದ ಹಾಂಗೆ ನೋಡಿದ್ದಿ.

ಎನಗೆ ಒಂದಾರಿ ಜ್ವರ ಬಂದಿಪ್ಪಾಗ ಅಪ್ಪ 'ನಡೆ ಸಾವಿತ್ರಿ, ನಾವು ಕಣ್ಯಾರವರೆಗೆ ಹೋಗಿ ಕೂಸಿನ ಕಾಕ್ಕೋಡು ಡಾಕ್ಟರ್ ಶ್ಯಾಮಣ್ಣಂಗೇ ತೋರ್ಸೆಂಡು ಬಪ್ಪೊ' ಕೂಸು ನರಳುದರ ಎನಗೆ ಕೇಳ್ಳೆ ಎಡಿತ್ತಲ್ಲೆ. ಜ್ವರ ಏರುವನ್ನು ಮದಲೆ ನಾವು ಡಾಕ್ಟ್ರಂಗೆ ತೋರ್ಸುದೇ ಒಳ್ಳದು. ಅವು ಅದು ಎಂತ ಜ್ವರ ಹೇಳಿ ಹೆಸರು ಮಡುಗಿ ಹೇಳುಗು. ಸುಮ್ಮಗೆ ನಾವು ಇಲ್ಲಿಯೇ ಕಾಲಹರಣ ಮಾಡುದು ಎಂತಕೆ" ಹೆಳಿದವು. ಅಂಬಾಗ ನೀನು –

"ಇಲ್ಲಿಂದ ಕಣ್ಯಾರಕ್ಕೆ ಎರಡು ಹರದಾರಿ ಆವುತ್ತು. ಈ ಎಂಟು ವರ್ಷದ ಕೂಸಿಗೆ ನೆಡಶ್ಯೊಂಡು ಹೋಪಲೆಡಿಗೋ" ಹೇಳಿ ಕೇಳಿದೆ ಅಂಬಾಗ ಅಪ್ಪಾ

"ಎಂತಕೆ ಎನಗೆ ದೇವರು ಎರಡು ರಟ್ಟೆ ಕೊಟ್ಟಿದು? ಆನು ಅದರ ನೆಡಶಿಗ್ಯೊಂಡು ಹೋಪನೋ ಹೇಳಿ ಎನ್ನ ಹೆಗಲಮೇಗೆ ಕೂರ್ಸೆಂಡೇ ಕಣ್ಯಾರಕ್ಕೆ ಕರಕ್ಕೊಂಡು ಹೋಗಿ ಬಂದವು. ಡಾಕ್ಟ್ರ ಪರೀಕ್ಷೆ ಮಾಡಿ "ಹಾಂಗೆಂತದೂ ಗಾಬ್ರಿ ಇಲ್ಲೆ ಮಾವ. ಇದು ಮಕ್ಕೊಗೆ ಬಪ್ಪ ಸಾಮಾನ್ಯ ಜ್ವರ. ಆನು ಅದಕ್ಕೆ ಇಂಜೆಕ್ಷನ್ ಮದ್ದು ಕೊಡುತ್ತೆ ಹೇಳಿಕೊಟ್ಟ" ಮಕ್ಕೊಗೆ ರಜಾ ಎಡಿಯದ್ದರೂ ಎನ್ನಿಂದ ನೋಡ್ಳೆ ಎಡಿತ್ತಿಲ್ಲೆ ಡಾಕ್ಟ್ರೆ. ಎನಗಿಪ್ಪದು ಎರಡು ಪಿಂಡಂಗೊ. ಅವಕ್ಕೆ ರಜಾ ಎಡಿಯದಿದ್ದರೂ ಎನಗೆ ತಡವಲಾವುತ್ತಿಲ್ಲೆ. ಅದರಲ್ಲೂ ಎಂಗಳ ಎಂಕಿ ಹೇಳಿರೆ ಎನಗೆ ಪಂಚಪ್ರಾಣ. ಅದು ಒಂದು ಗಳಿಗೆ ಮನೇಲಿಲ್ಲದಿದ್ದರೂ ಎನಗಾಗ. ಅದಕ್ಕೆ ಇಲ್ಲಿಗೆ ಓಡ್ಯೊಂಡು ಬಂದೆ. ನಿಂಗೊ ಹೇಳಿದ ಮತ್ತೇ ಎನಗೆ ರಜಾ ಸಮಾಧಾನ ಆತು. ಹೇಳಿದವು "ನಿಂಗೊ ಬಂದದು ಒಳ್ಳೆದಾತು ಮಾವ. ಸುಮ್ಮನೇ ಆ ಕಷಾಯ ಕುಡಿಸಿ ಮಾಟಮಂತ್ರ ಹೇಳಿ ಎಷ್ಟೆಷ್ಟೊ ಕರ್ಚು ಮಾಡಿ ಕೈ ಮೀರಿದ ಮೇಲೆ ಆಸ್ಪತ್ರೆಗೆ ಬತ್ತವು ಜೆನಂಗೊ. ಎಂಬಾಗ ಎಂತ ನೂಡ್ಳೂ ಆವುತ್ತಿರ್ಲೆ. ಹೀಂಗೆ ಎಷ್ಟು ಮಕ್ಕಳ ಪ್ರಾಣ ಹೋಯಿದು ಹೇಳಿ ನಿಂಗೊಗೆ ಗೊಂತಿದ್ದೊ. ಕಾಯಿಲೆ ರಜಾ ಇಪ್ಪಾಗ ತೋರ್ಸಿದರೆ ಬೇಗ ಕಮ್ಮಿ ಅಕ್ಕು ಕರ್ಚೂ ಕಮ್ಮಿಯೇ" ಹೇಳಿದ ಡಾಕ್ಟ್ರು.

ಅಂದು ಇರುಳು ಅಪ್ಪನೂ, ನೀನು ರಜವೂ ಕಣ್ಣು ಮುಚ್ಚಿದ್ದಿಲ್ಲಿ ಎನ್ನ ತೊಡೆ ಮೇಗೆ ಮನುಶಿ, ಅಂಬಾಗಂಬಾಗ ಮೈ ಮುಟ್ಟಿ ನೋಡುದು. ಬೊಂಡ ನೀರಿನ ಸಕ್ಕಣಲ್ಲಿ ಕುಡುಶುದೂ ಮಾಡಿದ್ದಿ."

"ಎಂಕಿಗಂಬಾಗ ಅದೆಲ್ಲಾ ನೆಂಪಿದ್ದೊ?"

"ನೆಂಪಿಲ್ಲದ್ದೆ ಆನು ಅಂಬಾಗ ಬರೇ ಸಣ್ಣ ಕೂಸಲ್ಲನ್ನೇ ಎಲ್ಲಾರು ಆನು ಒಂದು ಸೀನು ಸೀನಿದರೆ ಸಾಕು, ಅಪ್ಪ ಕೂಡ್ಳೇ ಹೇಳುಗು 'ಸಾವಿತ್ರಿ ಮಗಳಿಂಗೆ

ಶೀತ ಆಯಿದು ರಜಾಗೆನ ಮೆಣಸು, ಶುಂಠಿ ಹಾಕಿ ಕಷಾಯ ಮಾಡಿಕೊಡು,' ಒಂದು ಕೆಮ್ಮು ಬಂದರೆ ಸಾಕು ಕ್ಷಯರೋಗ ಒಂದಷ್ಟು ಗಾಬ್ರಿ ಅಕ್ಕು."

"ಅಪ್ಪು ಎಂಕಿ. ಅಪ್ಪಂಗೆ ಮಕ್ಕಳ ಜಾಗ್ರತೆ ಮಾಡಿದಷ್ಟೂ ಸಾಲ, ಎನ್ನಂದಲೂ ಲಾಯಕ್ಕಿಲ್ಲಿ ನೋಡಿದವು ನಿನ್ನ ಅಪ್ಪ."

"ಅದು ಹೇಳೇಡ ಅಬ್ಬೆ. ಅಪ್ಪಂಗೆ ಮನಸ್ಸಿತ್ತಿದ್ದರೆ ಎನ್ನನ್ನೂ ಮುಂದಕ್ಕೆ ಕಲುಶಿಕ್ಕಲಾವುತ್ತಿತ್ತು. ಆನೂ ಶಾರದೆ ಅತ್ತಿಗೆ ಹಾಂಗೆ ಮೆಟ್ರಿಕ್ ಪರೀಕ್ಷೆ ಕಟ್ಟುತ್ತಿತ್ತೆ. ಈಗ ನೋಡು ಆನು ಐದನೇ ಕ್ಲಾಸಿಂದ ಮುಂದೆ ಹೋಯಿದಿಲ್ಲೆ. ಸೂರ್ಯಂಬೈಲು ಶಾಲೆಲಿ ಅಷ್ಟೇ ಇತ್ತು. ಮುಂದೆ ಕಲಿಯೇಕಾರೆ ಕಣ್ಯಾರಕ್ಕೇ ಹೋಯೇಕಾತು. ಆನು ಹೋಪಲೆ ತಯಾರಿತ್ತಿದ್ದೆ. ಅಪ್ಪಂಗೆ ಮನಸ್ಸೇ ಇತ್ತಿಲ್ಲೆ!" ಬೇಜಾರಲ್ಲಿ ಹೇಳಿತ್ತು ಎಂಕಿ.

"ಮನಸ್ಸಿಲ್ಲದ್ದೆ ಅಲ್ಲ ಎಂಕಿ. ಇಲ್ಲಿಂದ ಕಣ್ಯಾರಕ್ಕೆ ಹೋಯೇಕಾರೆ ನೀನು ನೆಡಕ್ಕೊಂಡೇ ಹೋಯೇಕು. ಬಸ್ಸಿಂಗೆ ಪೈಸೆ ಕೊಡುವಷ್ಟು ತ್ರಾಣ ಎಂಗೊಗಿತ್ತಿಲ್ಲೆ. ದಿನವೂ ಆರಾರು ಮೈಲು ಹೋಗಿ ಬಂದು ಮಾಡೆಕು. ಅದೂ ಅಲ್ಲದ್ದೆ ಈ ಊರಿಂದ ಜೋಡಿಗೆ ಬೇರೆ ಒಂದು ಕೂಸೂ ಇತ್ತಿಲ್ಲೆ. ಅದಕ್ಕೆ ಅಪ್ಪ ಹೆದರಿದವು. ಮಾಣ್ಯಂಗೊ, ಮಾಪಳೆ ಕುಟ್ಟಿಗೊ ಚಾಲ್ಯಂಗಳ ಮಕ್ಕೊ ಮಾಂತ್ರ ಹೋಗ್ಯೊಂಡು ಇತ್ತಿದ್ದವು. ಈಗ ಆದರೆ ಹಾಂಗಲ್ಲ ಐದಾರು ಕೂಸುಗೊ ಹೋವುತ್ತವು".

"ಆನು ಶಾಲಿಗೆ ಹೋವುತ್ತೆ ಅಪ್ಪ" ಹೇಳಿದ್ದಕ್ಕೆ ಎನ್ನ ಬೈದು ಕೂರ್ಸಿದವು.

"ನಿನಗೆ ಅಳಗೆ ತೊಳದು, ಒಲೆ ಬೂದಿ ಬಾಚುದಕ್ಕೆ ಇಷ್ಟು ವಿದ್ಯೆ ಸಾಕು. ಸುಮ್ಮನೇ ಹಠ ಹಿಡಿಯೇಡ" ಹೇಳಿ ಹೆದರ್ಸಿದವು. ಅಂದಿಡೀ ಆನು ಕಣ್ಣೀರಿಲೇ ಮಿಂದೆ.

"ಶಾರದೆ ಅತ್ತಿಗೆ ಹೋವುತ್ತು. ಆನೂ ಹೋವುತ್ತೆ ಅಬ್ಬೆ ಹೇಳಿ ನಿನ್ನನ್ನೂ ಬೇಡ್ಯೊಂಡೆ" ಅಂಬಾಗ ನೀನೇ ಹೇಳಿದ್ದು.

"ಶಾರದತ್ತಿಗೆಯ ಅಪ್ಪ ಅದೇ ಶಾಲೆಲಿ ಮಾಷ್ಟ್ರ. ಅವರ ಮನೆ ಇಪ್ಪದು ಸೇಡಿಗುಮ್ಮೆಲಿ. ಕಣ್ಯಾರಕ್ಕೆ ಹತ್ತರಾವುತ್ತು. ಅಪ್ಪನೂ ಮಗಳೂ ಒಟ್ಟಂಗೇ ಮನೇಂದ ಹೆರಟು ಬಿಟ್ಟಂಗೇ ಮನಗೆ ಬತ್ತವು.

ಅದೂ ಅಲ್ಲದ್ದೆ ಅವರ ಮನೆಗೂ ಮಾದ್ರಿಗಳ ಶಾಲೆಗೂ ಇದ್ದದು ಎರಡು ಮೈಲು ಮಾಂತ್ರ. ಹಾಂಗಾಗಿ ಅದಕ್ಕೆ ಕಲಿವಲೆ ಆತು. ಆದರೆ ನಿನ್ನ ಅಪ್ಪ ಹೆಚ್ಚು ಕಲ್ತವಲ್ಲನ್ನೆ. ತೋಟ ಮನೆ ಹೇಳಿ ನೋಡ್ಯೊಂಡು ಇಪ್ಪವು.

ಸರಿಯಾಗಿ ಮೈ ಮುರುದು ದುಡುದರೆ ನವಗೆ ಬಪ್ಪದು ನಾಲ್ಕು ಖಂಡಿ ಅದಕ್ಕೆ ಅಲ್ಲದೊ. ಇಷ್ಟರಲ್ಲಿ ಅಪ್ಪ ಎಲ್ಲಾ ಸುಧಾರ್ಸೊಳೇಡದೋ? ನಿನಗೊ ತಮ್ಮ ಶ್ಯಾಮಂಗೊ ಇದ್ದದು ಎರಡೇ ವರ್ಷ ವ್ಯತ್ಯಾಸ. ಅವಂಗೆ ನಾಲ್ಕಕ್ಷರ ಕಲಿಶೇಡದೊ? ಅದಕ್ಕೆ ನಿನ್ನ ಓದಿಂಗೆ ತಡೆ ಬಂತು."

"ಆತು ಎಲ್ಲ ಮುಗುದತ್ತನ್ನೆ. ಎನಗೆ ಓದುವ ಋಣ ಇತ್ತಿಲ್ಲೆ ಅಷ್ಟೆ" ಎಂಕಿ ಬೇಜಾರಲ್ಲಿ ಹೇಳಿತ್ತು.

"ಹೆಚ್ಚು ಕಲಿಯದಿದ್ದರೆ ಎಂತಾತು ಎಂಕಿ. ಅಪ್ಪ ಹುಡುಕ್ಕಿ ನಿನ್ನ ಒಳ್ಳೆ ಮನೆಗೆ ಕೊಟ್ಟವಿಲ್ಲೆಯೋ? ನಿನಗೆಂತ ಕಮ್ಮಿ ಮಾಡಿದ್ದವು ಹೇಳು"

"ಅದಿಲ್ಲೆ ಹೇಳಿ ಹೇಳುತ್ತಿಲ್ಲೆ ಅಬ್ಬೆ. ಎನ್ನ ಶಾಲಗೆ ಕಳುಸದಿದ್ದರೂ ಅಪ್ಪ ಅಂಬಾಗಂಬಾಗ ನಾಯಕಾಪು ಶಾಲೆ ಲೈಬ್ರೆರಿಂದ ಕತೆ ಪುಸ್ತಕಂಗಳ ತಂದು ಕೊಟ್ಟಿದವು.

ಒಂದಾರಿ ಶಾರದೆ ಅತ್ತಿಗೆಯ ಕೆಮಿಲಿ ಹೊಸ ಲೋಲಾಕು ಕಂಡಿಪ್ಪಾಗ – ಎಂಕಿಗೂ ಹಾಂಗಿಪ್ಪ ಲೋಲಾಕು ಮಾಡ್ಸೇಕು. ಶಾರದೆಯ ಕೆಮಿಲಿ ಕಂಡು ಅದಕ್ಕೂ ಆಶೆ ಅಕ್ಕು ಹೇಳಿ ಆ ಸರ್ತಿ ಮಾರಿದ ಅಡಕ್ಕೆಂದ ಬಂದ ಪೈಸೆ ಕೊಟ್ಟು ಎನಗೂ ಒಂದು ಜೊತೆ ಕುಟುಕ್ಕು ಲೋಲಾಕು ತಂದು ಹಾಕಿದ್ದವು. ಅಪ್ಪ ಅಂಬಾಗ ನೀನು. "ಲೋಲಾಕು ತಪ್ಪಲೆ ಎಂತ ಅವ್ಸರ ಇತ್ತು ನಿಂಗೊಗೆ? ಇನ್ನು ವರ್ಷ ಪೂರ್ತಿ ತಿಂಬದಾದರೂ ಎಂತರ?" ಹೇಳಿ ಕೋಪುಸಿದೆ ಅಂಬಾಗ ಅಪ್ಪ ಹೇಳಿದವು.

" ನಿನಗೆ ಅರ್ಥ ಆವುತ್ತಿಲ್ಲೆ. ಸಾವಿತ್ರಿ ಎಂಕಿಯೂ ಶಾರದೆಯೂ ಒಂದೇ ಪ್ರಾಯದವು. ಶಾರದೆ ಕೆಮಿ ಚಿನ್ನವ ಕಂಡು ಎಂಕಿಗೂ ಹಾಂಗಿಪ್ಪದು ಬೇಕು ಹೇಳಿ ಆಶೆ ಆಗದ್ದಿಕ್ಕೊ?"

"ಎಂಕಿ ಎಂತ ನಿಂಗಳ ಹತ್ರೆ ಮಾಡ್ಸಿಕೊಡಿ ಹೇಳಿತ್ತೊ"

"ಅದು ಹೇಳದಿದ್ದರೂ ನಾವು ಅರ್ಥ ಮಾಡ್ಕೋಳೇಕು. ಅವಕ್ಕೀಗ ಹನ್ನೆರಡು ವರ್ಷ ಕಳುತ್ತು. ನಮ್ಮ ಕಷ್ಟ ಸುಖಗೊಂತಿದ್ದು ಬೇಕು ಹೇಳಿರ. ಆದರೆ ಅದರ ಮನಸ್ಸಿಲ್ಲಿ ಆಶೆ ಇರಹೇಳಿ ಹೇಂಗೆ ಹೇಳುತ್ತೆ! ಹೆಚ್ಚು ಹೇಳಿರೆ ಇನ್ನೊಂದು ಐದಾರು

ವರ್ಷ ಇಕ್ಕು ನಮ್ಮೊಟ್ಟಿಂಗೆ ಅದರ ಜಾನ್ಸಿಯೇ ಆನು ಅದಕ್ಕೆ ಲೋಲಾಕು ಮಾಡ್ಸಿದ್ದು" ಹೇಳಿದವು.

"ಇನ್ನು ಮುಂದಿನ ವರ್ಷ ಅಡಕ್ಕೆ ಕೊಯಿಲಿನವರೆಗೆ ನಾವು ಬದುಕ್ಕೇಡದೋ?"

"ಎಲ್ಲಿಂದಾದರೂ ಸಾಲವೋ ಸೋಲವೋ ಮಾಡಿ ನಿಂಗಳ ಸಾಂಕುವೆ ಹೆದರೇಡ ತೋಟಲ್ಲಿ ತೆಂಗಿನಕಾಯಿ, ಹಲಸಿನಕಾಯಿ, ಬಾಳೆಕಾಯಿ ಬತ್ತು. ಅದರ ಮಾರಿ ಆದರೂ ಬದುಕ್ಕುಲೆಡಿಗು. ಹೇಂಗೋ ಆವುತ್ತು. ನಮ್ಮ ಹಾಂಗಿದ್ದವಕ್ಕೆ ಪೈಸೆ ಆದ ಮತ್ತೆ ಮಾಡ್ಸುವೋ ಹೇಳಿರೆ ಆಗ. ಮನಸ್ಸಿಪ್ಪಾಗ ಮಾಡ್ಸಿ ಬಿಡೇಕು ಹೇಳಿ ಅಪ್ಪ ಮಾತು ಮುಗುಶಿದವು.

ಎನಗೆ ಮನಸ್ಸಿಲ್ಲಿ ಹಾಂಗಿಪ್ಪದು ಬೇಕು ಹೇಳಿ ಇದ್ದರೂ ಕೇಳ್ಳೆ ಧೈರ್ಯ ಇತ್ತಿಲ್ಲೆ, ನಿಂಗೊ ಬಪ್ಪ ಬಜವ ಆನು ಕಣ್ಣಾರೆ ಕಂಡಿದೆನ್ನೆ. ಅದರಂದ ಮತ್ತೆ ಆನು ಅಪ್ಪಂಗಾಗಲೀ ನಿನಗಾಗಲೀ ಯಾವುದಕ್ಕೂ ಬೇಡ್ಲೆ ಹೋಯಿದಿಲ್ಲೆ. ನಿಂಗೊ ಕೊಟ್ಟದ್ದಲ್ಲಿ ಹೇಳಿದ್ರಲ್ಲೆ ಸಮಾಧಾನ ಪಟ್ಟೆ. ಒಂದೊಂದಾರಿ ಅಪ್ಪ ಹೇಳಿದ್ದು ನಿಜ ಹೇಳಿ ಕಂಡತ್ತು. ಎನಗೆ ಹೆಚ್ಚು ವಿದ್ಯೆಗೆ ಕರ್ಚಿ ಮಾಡ್ಲೆ ಅಪ್ಪನ ಕೈಲಿ ಪೈಸೆಯೂ ಇತ್ತಿಲ್ಲೆ. ಹಾಂಗೆ ಅದರಿಂದ ಹೆಚ್ಚಿನ ಉಪಯೋಗವೂ ಇತ್ತಿಲ್ಲೆ. ಅದರಿಂದ ಮನೆ ಕೆಲಸವ ಕಲ್ತರೆ ಮುಂದಕ್ಕೆ ಎನಗೂ ಒಳ್ಳೆದು. ನಿಂಗೊ ಒಳ್ಳೆದು ಹೇಳಿ ಒಂದೊಂದೇ ಕೆಲಸವ ಕಲ್ತೊಂಡೆ. ನಿನ್ನೊಂಟ್ಟಿಂಗೆ ಅಡಿಗೆ ಕೆಲಸಕ್ಕೆ ಬಂದೆ ತೋಟಕ್ಕೆ ನೀರು ಚೇಪಲೆ ಸೇರಿದೆ. ನೀನು ಬತ್ತ ಮೆರಿವಾಗ ಆನೂ ಬಣಕ್ಕೆ ಹಾಕಲೆ ಕಲ್ತೆ ಈಗ ಎನಗೂ ಧೈರ್ಯ ಬಯಿಂದು ಅಬ್ಬೆ. ಎನಗೂ ನಿನ್ನ ಹಾಂಗೆ ಸಂಸಾರ ನೊಗ ಹೊರ್ಲೆ ಎಡಿಗು ಹೇಳಿ"

"ಅಪ್ಪು ಎಂಕಿ. ನಿನ್ನ ಕೊಟ್ಟ ಮನೆ ಶ್ರೀಮಂತರದ್ದು. ಆಳುಕಾಳುಗೊ ಎಲ್ಲಾ ಇದ್ದ ಮನೆ. ಇಲ್ಲಿ ದುಡಿದ ಹಾಂಗೆ ನಿನಗೆ ಅಲ್ಲಿ ದುಡಿಯೇಕಾಗಿ ಬಾರ. ಆದರೂ ಹೆಮ್ಮಕ್ಕೊಗೆ ಸರಿಯಾಗಿ ಕೆಲಸ ಗೊಂತಿದ್ದರೆ ಮಾಂತ್ರ ಬೇರೆಯವರ ಹತ್ರೆ ಕೆಲಸ ಮಾಡ್ಸೊಂಬಲೆ ಎಡಿಗು. ನಮಗೆ ಗೊಂತಿಲ್ಲದಿದ್ದರೆ ಅವರ ಹತ್ರೆ ಕೆಲಸ ಮಾಡ್ಸುದೇ ಕಷ್ಟ. ಅದಕ್ಕದ ಎಷ್ಟು ಜೆನ ಕೆಲಸದವು ಇದ್ದರೂ ಸರಿಗಟ್ಟು ಆಗದ್ದೇ ಇಪ್ಪದು. ಕೆಲಸದವರ ನವಗೆ ಗೊಂತಿದ್ದರೆ ಮಾಂತ್ರ ಬಗ್ಗುಸಲೆ ಎಡಿಗಪ್ಪು"

"ಅದಪ್ಪಬ್ಬೆ, ನವಗೆ ಗೊಂತಿದ್ರೆ ಮಾಂತ್ರ ಬೇರೆಯವರ ಹತ್ರೆ ಕೆಲಸ ಮಾಡ್ಸಲೆ ಎಡಿಗು." ಹೇಳಿ ನೀನು ಹೇಳಿದ್ದು ಸರಿ ಅಬ್ಬೆ. ಅದಕ್ಕದ ಆನು ನಿನ್ನೊಟ್ಟಿಂಗೆ ಎಲ್ಲಾ

ಕೆಲಸವನ್ನೂ ಕಲ್ತುದು. ಸುರುಸುರುವಿಲ್ಲೆ ನೀನು ಕೆಲಸ ಹೇಳ್ವಾಗ ಬೇಜಾರ ಆಯ್ಕೊಂಡು ಇತ್ತು.

"ಈ ಅಬ್ಬೆ ಎನ್ನ ಎಷ್ಟು ಬೊಡುಶುತ್ತಪ್ಪಾ ಹೇಳಿ ಕಂಡುಗೊಂಡು ಇತ್ತು ಒಂದೊಂದಾರಿ ಪಿಸುರು ಬಂದು 'ಮಾಡೆ' ಹೇಳಿಯೂ ಹೇಳಿದ್ದೆ. ಆದರೆ ನಿನಗೆ ಅಂಬಾಗ ರಜವೂ ಕೋಪ ಬಂದು ಕೊಂಡು ಇತ್ತಿಲ್ಲೆ. ಕೆಲಸ ಸರಿಯಾಗಿ ಕಲ್ತುಗೊ ಮಗಳೆ. ನಿನಗೆ ಹೇಂಗಿಪ್ಪ ಗಂಡನ ಮನೆ ಸಿಕ್ಕುತ್ತೋ ಎಂತದೋ. ಅತ್ತೆ ಹೇಂಗಿಪ್ಪದು ಸಿಕ್ಕತ್ತೋ. ಗೆಂಡ ಹೇಂಗಿದ್ದವನೋ ಹೇಳಿ ಹೆದರಿಕೆ ಆವುತ್ತು. ಅದಕ್ಕೆ ನಿನಗೆ ಎಲ್ಲಾ ಕೆಲಸ ಗೊಂತಿದ್ದರೆ ಒಳ್ಳೆದು ಹೇಳಿ ಪ್ರತಿಯೊಂದಕ್ಕೆ ನಿನ್ನ ದಿನಿಗೇಳುದು "ಗಂಡನ ಮನೇಲಿ ನೀನು ಅಬ್ಬೆ ಅಪ್ಪನ ಹೆಸರು ಹೇಳುಸುಲಾಗ.

ಅವು ಎಂಗೊಗೆ ಹಿಡಿ ಶಾಪ ಹಾಕಲಾಗ. ಹೇಳುವ ಉದ್ದೇಶಕ್ಕೇ ನಿನಗೆ ಕೆಲಸ ಹಚ್ಚದ್ದು ಮಗಳೇ. ಇಲ್ಲದಿದ್ದರೆ ಎನಗೆ ಈ ಮನೆ ಕೆಲಸಕ್ಕೆ ಆರ ಸಹಾಯವೂ ಬೇಡ. ಒಬ್ಬನೇ ಮಾಡಿ ಮಾಡಿ ಅಭ್ಯಾಸ ಆಯಿದು" ಹೇಳಿದೆ. ನೀನು ಹೇಳಿದ್ದರ ಅರ್ಥ ಮಾಡ್ಯೊಂಡೆ ಅಂದಿಂದ ಎಂದಾದರೂ ಆನು ನಿನಗೆ ವಿರುದ್ಧ ಹೇಳಿದ್ದಿದ್ದೊ. ನೀನೇ ಹೇಳು.

"ಇಲ್ಲೇ ಮಗಳೆ ನೀನು ಹೇಳಿದ ಹಾಂಗೆ ಮಾಡಿದ್ದೆ. ಎಲ್ಲಾ ಕೆಲಸಲ್ಲಿಯೂ ಪಳಗಿದ್ದೆ. ಅದಕ್ಕಲ್ಲದೊ ನಿನ್ನ ಅತ್ಯೋರು ವಿಟ್ಲ ಸೀಮೆಯ ಕೂಸುಗಳ ಬಿಟ್ಟು ಕುಂಬ್ಳೆ ಸೀಮೆಗೆ ಕೂಸು ಹುಡುಕ್ಕಲೆ ಬಂದುದು."

"ಎನಗೆ ಗೊಂತಿತ್ತಿಲ್ಲೆ ಅಬ್ಬೆ. ಏಂತಕಡ ಅವು ಇತ್ಲಾಗ್ಯಾಕಾ ಕೂಸು ಆಯೇಕು ಹೇಳಿದ್ದು.

"ಕುಂಬ್ಳೆ ಸೀಮೆ ಕೂಸುಗೋಕ್ಕೆ ಮೈ ಮುರಿದು ದುಡದು ಗೊಂತಿರ್ತು. ಒಳಾಣ ಕೆಲಸ, ಹೆರಾಣ ಕೆಲಸ ಎಲ್ಲಾ ಗೊಂತಿರ್ತು. ಕುಂಬ್ಳೆ ಸೀಮೆಲಿ ಹೆಚ್ಚಿನವು ಬಡವರೇ ಆದ ಕಾರಣ ಅವರವರ ಕೆಲಸ ಮನೆವರೇ ಮಾಡುತ್ತವು. ಹೆಮ್ಮಕ್ಕೊ ಮಕ್ಕೊ ಎಲ್ಲಾ ಕೆಲಸಲ್ಲಿ ಆಸರೆ ಆವುತ್ತವು. ವಿಟ್ಲ ಸೀಮೆ ಕೂಸುಗೋಕ್ಕೆ ಹೆಚ್ಚು ದುಡಿದು ಗೊಂತಿರ್ತಲ್ಲೆ. ಹೆಚ್ಚಿನವು ಶ್ರೀಮಂತರ ಮಕ್ಕೊ. ಆಳು ಕಾಳುಗಳ ಕೈಲಿ ಕೆಲಸ ಮಾಡ್ಸಿಯೇ ಗೊಂತು. ಅದಕ್ಕೆ ನೊಂಪಣ್ಣಂಗಳ ಹಾಂಗೆ ಇರ್ತವು. ಚೆಂದಕ್ಕೆ ಗೊಂಬೆಗಳ ಹಾಂಗೆ ಇರ್ತವೇ ವಿನಹ ಯಾವ ವೈವಾಟೂ ಗೊಂತಿರ್ತಿಲ್ಲೆಡ, ಅದಕ್ಕೆ ನಿನ್ನ ನೋಡಿದ ಕೂಡ್ಲೆ 'ಈ ಕೂಸು ಅಕ್ಕು' ಹೇಳಿ ನಿನ್ನ ಅತ್ತೆ ಶಿಪಾರ್ಸು ಮಾಡಿತ್ತು.

"ಅವು ಎನ್ನ ನೋಡಿದ್ದು ಒಂದೇ ಸರ್ತಿ ಅಲ್ಲದೋ ಅಬ್ಬೆ? ಅದೂ ಆನು ಹರುಕ್ಕು ಮುರ್ತುರ್ಜ ಸೀರೆ ಸುತ್ತ್ಯೊಂಡು ಮಾವಿನ ಹಣ್ಣು ಹರಿಕ್ಕೊಂಡು ಬಪ್ಪಾಗ ಅಲ್ಲದೋ?"

"ಅಪ್ಪು, ಅವು ನೋಡ್ಳೆ ಬಪ್ಪಾಗ ನೀನು ಮನೇಲಿ ಇತ್ತಿದ್ದಿಲ್ಲೆ. ನಸುಕ್ಕಿಂಗೆ ಎದ್ದು ಹುಳಿ ಮಾವಿನ ಹಣ್ಣು ಹೆರುಕ್ಕಲೆ ಹೇಳಿ ಅಡ್ಕದ ಹೊಡೆಯಾಣ ಮಾವಿನ ಮರದಡಿಂಗೆ ಮೂಡೆ ತೆಕ್ಕೊಂಡು ಹೋಗಿತ್ತಿದ್ದೆ. ನಿನ್ನ ಅತ್ತೊರೂ ಕೇಶವ ಹೇಳುವವನೂ ನಮ್ಮ ಮನೆಗೆ ಎದಿಯಪ್ಪಾಗಳೇ ಬಂದು ಇಳುದವು.

ಅವರಕರಕ್ಕೊಂಡು ನಿನ್ನ ಪುಟ್ಟು ಮಾವ ಪುರುಷೋತ್ತಮ ಮನೆಗೆ ಬಂದವ ಒಳ ಬಂದು ಅವು ಕೂಸಿನ ನೋಡ್ಳೆ ಬಂದವು. ಒಳ್ಳೆ ಅನುಕೂಲ ಇದ್ದವು. ಅವಕ್ಕೆ ಕೂಸಕ್ಕು ಹೇಳಿ ಆದರೆ ಕೊಡುತ್ತಿಲ್ಲೆ ಹೇಳಿ ಹೇಳೇಡಿ ಆತೋ. ಮತ್ತೆಲ್ಲಾ ಮತ್ತೆ ಮಾತಾಡವೊ ಹೇಳಿಕ್ಕಿ ಹೆರ ಹೋದ. ಎಂಗೊಗೆ ಎದೆ ಧಸಕ್ಕೆ ಹೇಳಿತ್ತು. ನಿನ್ನ ಅವತಾರ ನೋಡಿ ಅವು ಮೆಚ್ಚೇಕನ್ನೆ ಹೇಳಿ ಕಂಡತ್ತು. ನಿನ್ನ ಅಪ್ಪ "ಎಂಕಿಯ ಹಿಂದಿನ ಬಾಗಿಲಿಂದ ಒಳ ದಿನಿಗೇಳಿ ರಜಾ ಮೋರೆ ತೊಳಶಿ, ತಲೆ ಬಾಜಿ, ಒಳ್ಳೆ ವಸ್ತ್ರ ಸುತ್ತುಸಿ ಹೆರ ಕಳಸು ಹೇಳಿದವು. ಅಷ್ಟಪ್ಪಾಗ ನೀನು ಒಳ ಬಂದೆ.

"ಅದಾರಬ್ಬೆ ಹೆರ ಬಂದದು" ಕೇಳಿದೆ.

"ಅವು ನಿನ್ನ ನೋಡ್ಳೆ ಹೇಳಿ ಬಂದವು. ಬೇಗ ಮೋರೆ ತೊಳೆದು ಕುಂಕುಮ ಬೊಟ್ಟು ಹಾಯ್ಕೊಂಡು. ವಸ್ತ್ರ ಬದಲಾಯಿಸು" ಹೇಳಿದೆ. ನೀನು "ಎಂತಕಬ್ಬೆ ಆನು ಬಪ್ಪಾಗಲೇ ಅವರ ನೋಡಿ ಮಾತಾಡಿಕ್ಕಿ ಬಯಿಂದೆ." ಹೇಳಿದೆ.

"ಎಂತ ಹೇಳಿ ಕೇಳಿದವು?"

"ನಿನ್ನ ಹೆಸರೆಂತಬ್ಬೊ ಈ ಮೂಡೇಲಿ ಇಪ್ಪದು ಸಿಹಿಮಾವಿನ ಹಣ್ಣೋ; ಹುಳಿದೋ ಹೇಳಿ ಕೇಳಿದವು?

"ಆತಿದು, ನಿನ್ನ ಈ ಸುರ್ಪಲ್ಲೇ ನೋಡಿದ್ದವೋ? ಅವೀಗ ಕಾಫಿ ಕುಡುದಿಕ್ಕಿ ಎದ್ದಿಕ್ಕಿ ಓಡುಗು. ಕತೆ ಮುಗಾತು ಹೇಳಿ ನೀನು ಬೇಜಾರ ಮಾಡಿದ್ದಲ್ಲದೋ."

"ಅಪ್ಪು ಆದರೆ ಅವು ಹಾಂಗೆ ಮಾಡಿದ್ದವಿಲ್ಲೆ. ಅವಕ್ಕೆ ಕಾಫಿ ಅವಲಿಕ್ಕಿ ಚಟ್ನಿ ಮಾಡಿಕೊಟ್ಟ ಮತ್ತೆ ಮಾತಿಂಗೆ ಸುರು ಮಾಡಿತ್ತು ನಿನ್ನ ಅತ್ತ್ಯೋರು."

‘ಎಂಗೊ ಬಂದದು ಮಂಚಿಕಜೇಂದ. ವಿಟ್ಲಂದ ಸುಮಾರು ಹನ್ನೆರಡು ಮೈಲು ಆವುತ್ತು. ಎನಗೆ ಒಬ್ಬನೇ ಮಾಣಿ ಇಪ್ಪದು. ಎರಡು ಕೂಸುಗೊ ಹುಟ್ಟಿ ಸತ್ತು ಹೋದವು. ಇವ ಅಖೇರಿಗೆ ಹುಟ್ಟಿದವ. ಇವಂಗೆ ಬೇಕಾಗಿ ರಾಮಚಂದ್ರಾಪುರ ಮಠಕ್ಕೆ ಹರಕ್ಕೆ ಹೇಳಿದ ಮತ್ತೆ ಹುಟ್ಟಿದವ. ಇವನ ಅಪ್ಪ ಸತ್ತು ಇಪ್ಪತ್ತು ವರ್ಷ ಆತು. ಎನ್ನ ಮಾಣಿಗೆ ಈಗ ಇಪ್ಪತ್ತೈದು ನಡೆತ್ತು. ರಜಾ ಕೊಂಡಾಟಲ್ಲಿ ಬೆಳೆದ ಕಾರಣ ರಜಾ ಹಠಮಾರಿ ಆದ. ಅವನ ಬಗ್ಗುಸಲೆ ಸಾಧಾರಣ ಕೂಸುಗಳಂದ ಎಡಿಯ ರಜಾ ಬುದ್ಧಿದ್ದ ಕೂಸೇ ಆಯೇಕು ಹೇಳಿ ಕೂಸುಗಳ ನೋಡಿದ್ದೆ. ಎಲ್ಲಾ ಹೆಜ್ಜೆಗೆ ಬಿದ್ದ ನೆಳವಿನ ಹಾಂಗಿದ್ದವು. ಇವಂಗೆ ಮೂಗುದಾರ ಹಿಡಿವಲೆ ರಜಾ ಸಾಮಾರ್ತಿಗೆ ಇದ್ದ ಕೂಸೇ ಆಯೇಕು ಹೇಳಿ ಹುಡುಕ್ಕಲೆ ಸುರು ಮಾಡಿದ್ದೆ. ಅಷ್ಟಪ್ಪಗ ಈ ಕೇಶವ ಹೇಳಿದ ‘ಅತ್ತೆ ನಿಂಗೊಗೆ ಒಳ್ಳೆ ಕೂಸು ಬೇಕಾದರೆ ಕುಂಬ್ಳೆ ಸೀಮೆಗೆ ಹೋಗಿ. ಅಲ್ಯಾಣ ಕೂಸುಗೊ ಗಟ್ಟಿಮುಟ್ಟು ಆಗಿ ಎಲ್ಲಾ ಕೆಲಸ ಗೊಂತಿದ್ದವೂ ಆಗಿರ್ತವು. ಎನಗೆ ಮದುವೆ ಆದ್ದು ಅತ್ಲಾಗಿಂದ. ಬಡಗ ಮೂಲಗೆ ಹತ್ರಂದ ಎಲ್ಲ್ಯ ವೈವಾಟೂ ನೋಡ್ಕೋಳುತ್ತು ಹೇಳಿದ.’”

‘ಅಂಬಾಗ ಅಲ್ಲೆಲ್ಯಾರು ಕೊಡುವ ಕೂಸಿಕ್ಕೊ? ನಿನಗೆ ಗೊಂತಿದ್ದೊ’ ಹೇಳಿ ಕೇಳಿದೆ.

“ಎಡನ್ನಾಡಿಲ್ಲಿ ಎನಗೆ ಗೊಂತಿಪ್ಪ ಕುಳ ಬಂದಿದ್ದು. ಅವರ ಕೂಸು ಮೈ ನೆರೆದು ಎರಡು ವರ್ಷ ಆತು. ಅವು ಬಡವರು ಆದರೂ ಮರ್ಯಾದಸ್ಥರು. ಕೂಸೂ ಕಾಂಬಲೆ ಚೆಂದ ಹೇಳುವಷ್ಟು ಅಲ್ಲದಿದ್ದರೂ ಬರೆ ಕೊಳಕ್ಕಲ್ಲ. ಮೋರೇಲಿ ಲಕ್ಷಣ ಇದ್ದು! ಹೇಳಿದ. ಅದಕ್ಕೆ ಆನು ಅವನನ್ನೇ ಕರಕ್ಕೊಂಡು ಇಲ್ಲಿಗೆ ಬಂದದು. ಎಂಗೊಗೆ ಕೂಸಿನ ನೋಡಿ ಆತು. ಕೂಸು ಆನು ಜಾನ್ಸಿದ ಹಾಂಗೇ ಇದ್ದು. ಇನ್ನು ಮುಂದಾಣ ವಿಚಾರ ಮಾತಾಡುವೊ;

ಅದು ಅಷ್ಟೇ ಹೇಳುದೇ ತಡ ಎಂಗಳ ತಲೇಂದ ದೊಡ್ಡ ಬಂಡೆಕಲ್ಲು ಕೆಳ ಹಾಕಿದಷ್ಟು ಹಗುರ ಆತು. ಹೇಂಗಾರೂ ಕೂಸಿನ ಕೊಡೇಕನ್ನೆ. ಒಂದಾರಿ ಆನೂ ಅತ್ಲಾಗಿ ಬಂದು ನೋಡ್ಯೋಳ್ತೆ. ಮತ್ತೆ ನಾವು ಮಾತುಕತೆ ಮುಗುಶುವೊ’ ಹೇಳಿದವು ನಿನ್ನ ಅಪ್ಪ. “ನಿಂಗೊ ಅತ್ಲಾಗಿ ಹೋಗಿಯೇ ಮಾತುಕಥೆ ಮುಗುಶೇಕು ಹೇಳಿ ಇಲ್ಲೆ ಭಾವ. ಈ ಅತ್ತೆಯ ಮನೆಯ ಎಲ್ಲಾ ವಿಷಯ ಎನಗೆ ಸರಿಯಾಗಿ ಗೊಂತಿದ್ದು. ಆನು ಅವರ ಮನಗೂ ಒಂದೆರಡು ಸರ್ತಿ ಹೋಗಿ ಬಯಿಂದೆ” ಹೇಳಿದ ನಿನ್ನ ಮಾವ ಪುರುಷೋತ್ತಮ.

"ಅವೂ ಒಂದಾರಿ ಮನೆಗೆ ಬಂದು ಹೋಗಲಿ! ಅದೆಂತ ತಪ್ಪೋ! ಎಷ್ಟಾದರೂ ಹೆಣ್ಣು ಹೆತ್ತವಲ್ಲದೊ? ಅವರ ಕೂಸು ಸುಖಲ್ಲಿ ಇರೇಕು ಹೇಳುವ ಕಲ್ಪನೆ ಅವಕ್ಕೆ ಇಲ್ಲದ್ದೆ ಇಕ್ಕೊ. ನಿಂಗೊ ಒಂದಾರಿ ಬನ್ನಿ ಮನೆಗೆ. ನಿಂಗೊ ಬಂದು ನೋಡಿ ತೃಪ್ತಿ ಆದರೆ ನಾವು ಮಾತು ಮುಗುಶುವೊ." ಹೇಳಿತ್ತು ನಿನ್ನ ಅತ್ತ್ಯೋರು.

ಹಾಂಗದ ಅಪ್ಪನೂ ಪುಟ್ಟುಮಾವನೂ ಅತ್ಲಾಗಿ ಹೋದವು. ಮಾತುಕತೆ ಮುಗುಶಿ ಮೂರ್ತ ಎತ್ತಿಕ್ಕಿಯೇ ಬಂದದು. 'ಈ ತಿಂಗಳು ಹೋಯೇಕಾರೆ ಮದುವೆ ಮುಗುಶೇಕು. ಮುಂದಿನ ತಿಂಗಳುಗೆ ಮೌಢ್ಯ ಬತ್ತು.' ಹೇಳಿ ಗಡಿಬಿಡಿಲಿ ನಿನ್ನ ಧಾರೆ ಎರದು ಕೊಟ್ಟದು. ಅವು ನೋಡಿಕ್ಕಿ ಹೋಗಿ ಇಪ್ಪತ್ತನೇ ದಿನಕ್ಕೆ ನಿನ್ನ ಮದುವೆ ಮಾಡಿ ಕೊಟ್ಟು ಆತನ್ನೆ.

"ಅವರ ಮನೆ ವಿಷಯ ಎಲ್ಲಾ ಪುಟ್ಟು ಮಾವಂಗೆ ಹೇಂಗೆ ಗೊಂತಾದ್ದು?" ವೆಂಕಿಗೆ ಅನುಮಾನ ಬಂತು.

"ನಿನ್ನ ಪುಟ್ಟ ಮಾವನೂ ಕೇಶವನೂ ಕೊಡೆಯಾಲಲ್ಲಿ ಒಂದೇ ಕಾಲೇಜಲ್ಲಿ ಕಲ್ತವಡಾ. ಹಾಂಗೆ ಅವಕ್ಕೆ ಪರಿಚಯ. ಕೇಶವ ನಿನ್ನ ಅತ್ತ್ಯೋರಿನ ತಮ್ಮನ ಮಗಾಡ. ಅತ್ತೆ ಒಟ್ಟಿಂಗೇ ಇದ್ದು ಬೆಳೆದವಾಡ. ಅವಂಗೀಗ ಅಬ್ಬೆ ಅಪ್ಪ ಆರೂ ಇಲ್ಲೆಡ. ಅದಕ್ಕೆ ಅತ್ತೆ ಮನೇಲಿ ರೈಟರ ಆಗಿ ಕೆಲಸ ನೋಡ್ಯೊಂಡು ಇತ್ತಿದ್ದ. ಅವಂಗೆ ಇತ್ತೀಚೆಗೆ ಮದುವೆ ಆದ ಮತ್ತೆ. ಅಲ್ಲೇ ಹತ್ರೆ ಬೇರೆ ಬಿಡಾರ ಮಾಡಿ ಕೂರ್ಸಿದಾಡ. ಅವಂಗೆ ಬೇಕಾದ ಅನುಕೂಲ ಎಲ್ಲಾ ಮಾಡಿಕೊಟ್ಟು ತಿಂಗಳಿಂಗೆ ಇಂತಿಷ್ಟು ಹೇಳಿ ಸಂಬಳವನ್ನೂ ಕೊಡುತ್ತಾಡ. ಇದೆಲ್ಲಾ ಎನಗೆ ಪುರುಷ ಮಾವ ಹೇಳಿದ್ದು. ಹಾಂಗಾಗಿ ಅವು ಪುರುಷ ಮಾವನ ಕರಕ್ಕೊಂಡೇ ನಿನ್ನ ನೋಡ್ಲೆ ಇಲ್ಲಿಗೆ ಬಂದದು.

"ಅತ್ತೆಯ ಕೆಮಿ ಹಾಲೆಲಿ ದೊಡ್ಡ ಒಟ್ಟೆ ಇದ್ದನ್ನೆ. ಹಾಲೆ ಹೆಗಲಿನವರೆಗೆ ತಾಗುತ್ತು. ಅದೆಂತಕೆ ಅಬ್ಬೆ."

"ಅದೋ, ಅದರ ಸಂಗತಿಯನ್ನು ಮಾವ ಹೇಳಿದ. ಅದರ ಅಪ್ಪನ ಮನೆ ಪಾಲ್ಘಾಟಿನ ಹತ್ರಾಡ. ಹೇಳಿರೆ ಕೇರಳದ್ದು ಮಲ್ಯಾಳ ಅದರ ಭಾಷೆ – ಅದು ನಿನ್ನ ಮಾವನೋರಿಂಗೆ ಎರಡನೇ ಹೆಂಡತಿಯಾಡ. ಮದಲಾಣದ್ದು ಸುಭದ್ರ ಹೇಳುದು ಸಾಯುವಾಗ ನಿನ್ನ ಮಾವನೋರಿಂಗೆ ಐವತ್ತು ವರ್ಷ ದಾಂಟಿದ್ದಾಡ. ಅದು ಮಕ್ಕೊ ಇಲ್ಲದ್ದೆ ಸತ್ತ ಕಾರಣ ಸತ್ತಿಪ್ಪಾಗ ಎಳ್ಳು ನೀರು ಬಿಡ್ಲೂಗತಿ ಇಲ್ಲದ್ದ ಹಾಂಗಾತನ್ನೆ; ಆನು ಇನ್ನೊಂದು ಮದುವೆ ಆವುತ್ತೆ ಹೇಳಿ ಹೆರಟಾಂಡ. ಊರಿಲ್ಲಿ ಮುದಿಯಂಗೆ ಕೂಸು ಕೊಡವು ಹೇಳಿ ಕೇರಳಕ್ಕೆ ಹೋಗಿ ನಿನ್ನ ಅತ್ತೆಯ ಮದುವೆ ಆದಾಂಡ.

ಅಂಬಾಗ ನಿನ್ನ ಅತ್ತಗೆ ಬರೇ ಹನ್ನೆರಡು ವರ್ಷಾಡ. ಮೈನೆರವನ್ನಾರ ಅಪ್ಪನ ಮನೇಲಿಯೇ ಇರಳಿ ಹೇಳಿ ಅಲ್ಲಿಯೇ ಬಿಟ್ಟಿಕ್ಕಿ ಬಂದವಾಡ. ನಿನ್ನ ಅತ್ಯೋರಿಂಗೆ ಅಬ್ಬೆ ಅಪ್ಪನ ಬಿಟ್ಟು ಊರು ಬಿಟ್ಟು ಬಪ್ಪಲೆ ಮನಸ್ಸೇ ಇತ್ತಿಲ್ಲೆಡ. ಅಂಬಾಗ ಅದರ ದೋಸ್ತಿ ಕೂಸು ಹೇಳಿತ್ತಾಡ. 'ನೀನು ಕೆಮಿ ಹಾಲೆಯ ಒಟ್ಟೆ ದೊಡ್ಡಕ್ಕೆ ಮಾಡು.. ಕರ್ನಾಟಕದವಕ್ಕೆ ಹಾಂಗಿಪ್ಪ ಹಾಲೆ ಇದ್ದವರ ಕಂಡರಾಗ. ಮತ್ತೆ ನಿನ್ನ ಗಂಡನ ಮನೆಯವು ನಿನ್ನ ಕರಕ್ಕೊಂಡು ಹೋಗವು. ನಿನ್ನ ಇಲ್ಲಿಯೇ ಬಿಟ್ಟಿಕ್ಕಿ ಹೋಕು' ಹೇಳಿತ್ತಾಡ. ಅದರ ನಂಬಿ ನಿನ್ನ ಅತ್ಯೋರು ತಾಳೆಮರದ ತಿರಿಯ ಸುತ್ತಿ ಸುತ್ತಿ ಕೆಮಿಗೆ ಮಡುಗಿ ಮಡುಗಿ ಹಾಲೆಯ ಹೆಗಲಿಂಗೆ ಮುಟ್ಟುವವರಗೂ ಬೆಳಶಿತ್ತಾಡ.

ನಿನ್ನ ಅಪ್ಪಂಗೆ ಎನಗೆ ಇರುಳೂ ಹಗಲೂ ಅದೇ ಚಿಂತೆ ಆಯಿದು 'ದೊಂಡೆಲಿ ಅಶನ ನೀರು ಇಳಿಯದ್ದ ಹಾಂಗಾಯಿದು' ಹೇಳಿ ತಲೆ ಬೆಶಿ ಮಾಡ್ಲೆ ಸುರು ಮಾಡಿದವು. 'ಹೀಂಗೆ ಮುರುಟ್ಯೊಂಡು ಕೂದರೆ ಅಕ್ಕೋ? ಎಂತಾರೂ ಮಾಡಿ ಕೂಸಿನ ಧಾರೆ ಎರದು ಕೊಡೇಡದ್ದೊ?' ಕೇಳಿದೆ. 'ಎಂತ ಮಾಡೇಕು ಹೇಳಿಯೇ ಅರಡತ್ತಿಲ್ಲೆ ಸಾವಿತ್ರಿ, ಅದಕ್ಕೆ ಆನು ಹೀಂಗೆ ಕೂದ್ದು ಹೇಳಿದವು'

"ನಿಂಗೊ ಕುಞೆಯ ಒಂದಾರಿ ಇತ್ಲಾಗಿ ಬಾ ಹೇಳಿ ಕರಕ್ಕೊಂಡು ಬನ್ನಿ. ಅವನ ಹತ್ರೆ ಹೇಳಿ ಆನು ರಜಾ ಪೈಸೆಯ ವ್ಯವಸ್ಥೆ ಮಾಡ್ತುವೆ" ಹೇಳಿದೆ. ಹಾಂಗೇ ಅಪ್ಪ ಹೋಗಿ ನಿನ್ನ ಕುಞೆ ಮಾವನ ಕರಕ್ಕೊಂಡು ಬಂದವು.

"ಇದಾ ಕುಞೆ, ನಿಂಗೊ ಎಲ್ಲಾ ರಜಾ ಹೆಗಲು ಕೊಟ್ರೆ ಎಂಕಿಯ ದಾಂಜುಸಲೆಡಿಗು. ನಿನ್ನ ಭಾವನ ಕೈಲೀಗ ಕುರುಡು ಕಾಸಿಲ್ಲೆ. ಅದು ಇದು ಹೇಳಿ ಮದುವೆಗೆ ಹತ್ತು ಸಾವಿರ ಬೇಕು. ನೀನು ಪುಟ್ಟನೂ ಸೇರಿ ಭಾವಂಗೆ ಹೆಗಲು ಕೊಡಿ. ಅದಕ್ಕೆ ನಿನ್ನ ಕರಕ್ಕೊಂಡು ಬಪ್ಪಿಲೆ ಹೇಳಿದ್ದು" ಹೇಳಿದೆ.

"ಎನಗೂ ರಜಾ ಅಂದಾಜಿ ಆಯಿದು ಪುಟ್ಟಕ್ಕ. ಇಲ್ಲದಿದ್ದರೆ ಅಷ್ಟು ಅರ್ಜೆಂಟಿಲ್ಲಿ ಎನ್ನ ಬಪ್ಪಲೆ ಹೇಳುತ್ತಿತ್ತಿಲ್ಲೆ ಹೇಳಿ ಕಂಡತ್ತು. ಎನ್ನ ಹತ್ರೆ ಈಗ ನಗದಿ ಇಲ್ಲದಿದ್ದರೂ ಆನು ಕೆಲಸ ಮಾಡುವ ಬಂಡಸಾಲೆಯ ಕಮ್ತಿಕೈಂದ ಎರಡು ಸಾವಿರ ರೂಪಾಯಿ ಸಾಲ ತಪ್ಪೆ. ಮತ್ತೆ ಪುಟ್ಟಣ್ಣನೂ ಹೇಳಿಗೊಂಡು ಇತ್ತಿದ್ದ ಎಂಕಿ ಮದುವೆಗೆ ನಾವು ರಜಾಕ್ಕೆ ಕೊಡೆಕಾವುತ್ತು ಹೇಳಿ. ಅವನೂ ಎರಡೋ ಮೂರೋ ಕೊಡುಗು. ಮತ್ತೆ ತೆಂಗಿನಕಾಯಿ, ಬಾಳೆಕೊನೆ ಅಡಕ್ಕೆ ಹೇಳಿಯೂ ರಜಾ ಕೊಡ್ಳಕ್ಕು ಒಟ್ಟು ಐದು ಸಾವಿರದವರೆಗೆ ಎಂಗೊ ಹೆಗಲು ಕೊಡುವೆಯೋ ಹೇಳಿಕ್ಕಿ ಹೋದ. ಅಪ್ಪಂಗೆ ರಜಾ ಜೀವ ಬಂತು."

"ಮೇಲಾಣ ಕರ್ಚಿಗೆ ಸಾಕು ಸಾವಿತ್ರಿ. ಇನ್ನು ಕೂಸಿನ ಒಡವೆಗೋಕ್ಕೆ ಎಂತ ಮಾಡುದು" ಕೇಳಿದವು. "ಎನ್ನ ಚಕ್ರ ಸರವ ಮುರುಶಿ ಬಳೆ ಮಾಡ್ಸಿ. ಎನ್ನ ಕೊಪ್ಪು, ಬುಗುಡಿ ಕರಗಿಸಿ ಒಂದೆಳೆ ಚೈನು ಮಾಡ್ಸಿದರಾತು" ಹೇಳಿದೆ ಆನು.

"ಅದು ನಿನಗೆ ಆಪತ್ತು ಧನ ಹೇಳಿ ನಿನ್ನ ಅಪ್ಪನ ಮನೇಂದ ಕೊಟ್ಟದು. ಅದಕ್ಕೆ ಕೈ ಹಾಕುತ್ತಿಲ್ಲೆ" ಹೇಳಿದವು ನಿನ್ನ ಅಪ್ಪ.

"ಈಗ ನವಗೆ ಬಂದದು ಆಪತ್ತೆ ಅಲ್ಲದೋ? ಮಕ್ಕೊಗೆ ಇಲ್ಲದ್ದು ಎನಗೆಂತಕೆ? ಎನಗೆಂತದು ಈಗ ಹದಿನೆಂಟು ವರ್ಷವೋ. ಹಾಕುವ ಸಮಯಲ್ಲಿ ಎಲ್ಲಾ ಹಾಕಿದ್ದೆ."

"ಮತ್ತೆ; ಹದಿಮೂರನೇ ವರ್ಷಕ್ಕೆಪ್ಪಾಗ ಮೈನೆರತ್ತು. ನಿನ್ನ ಮಾವನೋರು ಬಂದು ಕರಕ್ಕೊಂಡು ಹೋದವು. ಹಾಲೆಯ ಒಟ್ಟೆ ದೊಡ್ಡದಿದ್ದು ಹೇಳಿ ದೊಡ್ಡ ಓಲೆಯನ್ನೇ ಹಾಕಿದವಾಡ. ಅದರ ಭಾರ ತಗ್ಗಲೆ ಚಿನ್ನದ ಸರಪ್ಪುಳಿಯನ್ನು ಮಾಡ್ಸಿದವಾಡ. ಕೊರಳಿಂಗೆ ಹೊರಲಾರದಷ್ಟು ಚಿನ್ನ ಹಾಕಿದವಾಡ"

"ಈಗ ಅವರ ಮೈಮೇಗೆ ಹೆಚ್ಚು ಬಂಗಾರ ಇಲ್ಲೆ"

"ನಿನ್ನ ಮಾವನೋರು ಸತ್ತ ಮೇಲೆ ಎಲ್ಲಾ ಕಳಚ್ಚಿ ಮಡುಗಿತ್ತಾಡ. ಕೈಗೆ ಎರೆಡೆರಡು ಬಳೆ. ಕೊರಳಿಂಗೆ ಬಂಗಾರದ ಗೋಪು ಮಾಂತ್ರ"

"ನೀನು ಇಷ್ಟೆಲ್ಲಾ ವರ್ತಮಾನವ ಸಂಗ್ರಹಿಸಿದ್ದಿಯೋ ಅಬ್ಬೆ. ಎನಗೆ ಗೊಂತೇ ಇಲ್ಲೆ"

"ಎಲ್ಲಾ ಸಂಗತಿ ನಿನ್ನ ಪುರುಷ ಮಾವನೇ ಹೇಳಿದ್ದು. ಅವಂಗೆ ಕೇಶವ ಹೇಳಿದ್ದು ಕೇಶವಂಗೆ ನಿನ್ನ ಅತ್ತ್ಯೋರೇ ಹೇಳಿದ್ದು."

"ಅಂತೂ ಎನ್ನ ಮದುವೆಗೆ ಮಾವ ಸುಮಾರು ಕೆಲಸ ಮಾಡಿದ್ದ ಹೇಳಿ ಆತು."

"ಅಪ್ಪು, ಅವಂದಾಗಿಯೇ ಅಲ್ಲಿಗೆ ಕೂಡ್ಳೆ ನಿನ್ನ ಅಪ್ಪ ಧೈರ್ಯ ಮಾಡಿದ್ದು."

"ಅದೆಲ್ಲಾ ಅಪ್ಪು ಅಬ್ಬೆ. ಎನ್ನ ಮದುವೆಗೆ ಕರ್ಚಿಗೆ ಎಂತ ಮಾಡಿದ್ದಿ ನಿಂಗೊ? ನಿಂಗಳ ಹತ್ರೆ ಸುಟ್ಟು ತಿಂಬಲೆ ಕಾಸೂ ಇತ್ತಿಲ್ಲೆನ್ನೆ ಹೇಳಿ ಆತು."

"ನೀನು ಕೇಳಿದ್ದು ಒಳ್ಳೆದೇ ಆತು. ಮದುವೆಗೆ ಮೂರ್ತ ಎತ್ತಿದ ಮತ್ತೆ ನಿನ್ನ ಅಪ್ಪ ತಲೆ ಮೇಗೆ ಕೈ ಹಿಡುಕ್ಕೊಂಡು ಕೂದವು."

ಆನು ಹೇಳಿದೆ. 'ನಿಂಗೊ ಹೀಂಗೆ ಕೂದ್ದು ಎಂತಕೆ? ಹೇಳಿ'

"ಹೇಂಗೆ ಜೆಂಬಾರ ಸುದಾರ್ಸೇಕು 'ಸಾವಿತ್ರಿ' ಕೈಲಿ ಒಂದು ಬಿಡಿ ಕಾಸೂ ಇಲ್ಲೆ. ಎಷ್ಟು ಕಮ್ಮಿ ಹೇಳಿರೂ ಮದುವೆ ಕರ್ಚಿಗೆ ಹತ್ತು ಸಾವಿರ ರೂಪಾಯಿ ಆದರೂ ಬೇಡದೋ. ಎನ್ನ ಮಾರಿದರೂ ನಾಲ್ಕು ಕಾಸು ಹುಟ್ಟ, ಹೇಂಗೆ ಸುದಾರ್ಸಲಿ?"

"ಈಗ ಎನಗೆ ಅದೆಲ್ಲಾ ಬೇಡ. ಎಂಕಿಗೆ ಬೇಕಾದ ಚಿನ್ನವ ಮಾಡ್ಸಿ" ಹೇಳಿದೆ.

"ಅಂಬಾಗ ಅವು ಚಿನ್ನ ಬೇಡಿದ್ದವೋ ಅಬ್ಬೆ"

"ಇಲ್ಲೆಪ್ಪಾ. ಎಂತಾರೂ ಹೇಳಿರೆ ಎಂಗಳ ಬಾಯಿಲಿ ಹುಳು ಉದುರುಗು" ನಿಂಗೊ ಕೂಸಿಂಗೆ ಹೇಳಿ ಎಂತ ಚಿನ್ನವೂ ಹಾಕೇಡಿ. ಅದರ ಕೊರಳು ಒಡಿವಷ್ಟು ಒಡವೆಗೂ ಮನೇಲಿಯೇ ಇದ್ದು. ಪೂರ್ವಕಾಲದ ಚಿನ್ನವೇ ಮನೇಲಿಯೇ ಇದ್ದು. ಮದುವೆ ಕರ್ಚಿಗೆ ಹೇಳಿಯೂ ನಿಂಗೊ ಅಸಬಡಿಯೇಕು ಹೇಳಿ ಇಲ್ಲೆ. ಇಷ್ಟಾಕ್ಕು ಹೇಳಿರೆ ಅಷ್ಟೂ ಕೊಟ್ಟು ಕಳುಸುವೆ. ಹೇಳಿದ್ದಾಡ ನಿನ್ನ ಅತ್ತ್ಯೋರು ಅವು ಹಾಂಗೆ ಹೇಳಿರೂ ಎಂಗಳ ಮನಸ್ಸು ಕೇಳುತ್ತೋ? ಎಂಗೊ ಮಾಡೇಕಾದರೆ ಎಂಗಳೇ ಮಾಡಿದರೆ ಚೆಂದ ಅಲ್ಲದೋ."

"ಎಂತಕಬ್ಬೆ ಹಾಂಗೆಲ್ಲಾ ಮಾಡಿದ್ದೆ. ಎನಗೆ ರಜಾ ಗೊಂತಾಗಿದ್ದರೂ ಆನು ನಿನ್ನ ಒಡವೆಗಳ ಕರುಗುಸಲೆ ಬಿಡುತ್ತಿತ್ತಿಲ್ಲೆ."

"ಅದಕ್ಕದ ನಿನಗೆ ಗೊಂತಾಗದ್ದ ಹಾಂಗೆ ಮಾಡಿದ್ದು?" ಅಬ್ಬೆನೆಗೆ ಮಾಡಿತ್ತು. ಎಂಕಿಗೆ ಕರುಳು ಚುರ್ ಹೇಳಿತ್ತು. ಬಡವರ ಮನೇಲಿ ಹೆಣ್ಣಾಗಿ ಹುಟ್ಟಿದರೆ ಎಷ್ಟು ಕಷ್ಟ ಹೇಳಿ ಕಂಡತ್ತು.

"ಮತ್ತೆ ಜವುಳಿ ತಪ್ಪಲೆ ಅಪ್ಪ ಎನ್ನನ್ನೇ ಕರಕ್ಕೊಂಡು ಕಣ್ಯಾರಕ್ಕೆ ಹೋಗಿ ಬಂಡಾರಿ ಅಂಗ್ಡಿಂದ ಪಟ್ಟೆ ಸೀರೆ ಕೂಡ್ಸಿದವು. ಎನಗೆ ಸಾದಾ ಮಗ್ಗದ ಸೀರೆ ಸಾಕಾವುತ್ತಿತ್ತಿಲ್ಲೆಯೋ? ಹೇಂಗಾರು ಅವು ಬಟ್ಟಲ್ಲಿ ಮಡುಗಿದ ಸೀರೆಯನ್ನೇ ದಾರೆಗೆ ಸುತ್ತುದು. ಮತ್ತೆಂತಕೆ ಅಷ್ಟು ಕ್ರಯದ್ದು ಕೊಡ್ಸಿದ್ದು"

"ಅವು ನಿನಗೆ ಬಟ್ಟಲ್ಲಿ ಮಡಗಿದ್ದು ಪೀತಾಂಬರ ಸೀರೆ. ಅದರ ಕಂಬಿ ಮೈಯ್ಯಿಪೂರ್ತಿ ಬೆಳ್ಳಿಂದ ಮಾಡಿದ ಜೆರಿ ಇದ್ದು ನೆಗ್ಗಿದರೆ ಎರಡು ಸೇರು ತೂಕ ಇದ್ದು. ಬಟಲ್ಲಿ ಮಡುಗಿದ ಬಂಗಾರಕ್ಕೆ ಲೆಕ್ಕವೇ ಇಲ್ಲೆ. ಐದೆಳೆ ಚಕ್ರಸರ ಒಂದೆಳೆ

ಪವನ ಸರ. ಒಂದೆಳೆ ಅಡ್ಡಿಗೆ ಚೈನು. ಒಂದು ಗೆಜ್ಜೆ ಟಿಕ್ಕಿ, ನಾಲ್ಕು ನಾಲ್ಕು ಬಳಗೊ. ಜೆಡಗೆ ಹಾಕಲೆ ತಿರುಪ್ಪಿನ 6 ಹೂಗೂ. ಮುಂದಲೆಗೆ ಮಲ್ಲಿಗೆ ಮುಗುಚಿನ ಸರಪ್ಪುಳಿ. ಕೆಮಿಗೆ ಬೆಳಕಲ್ಲಿನ ಬೆಂಡು ಇಷ್ಟು ಮಡುಗಿದ್ದವಡಾ."

"ನಿನ್ನ ಅತ್ಯೋರು ಹೇಳಿದ ಹಾಂಗೆ ಇದೆಲ್ಲಾ ಹಾಕಿದ ಮತ್ತೆ ನಿನ್ನ ಕೊರಳು, ಬಿಡುದೇ ಹೋಯಿದು. ಊರವಕ್ಕೆಲ್ಲಾ ನಿನ್ನ ಆಯತವ ನೋಡಿದಂಗಾಗಿ ಹೋದವು.

"ನೀನು ಒಂದು ನಗವ ಬಿಟ್ಟಿದೆಬ್ಬೆ. ಸೊಂಟಕ್ಕೆ ಹಾಕಿದಕಲ್ಲು ಮಡುಗಿದ ಚಿನ್ನದ ಡಾಬಿನ"

"ಅಪ್ಪದಾ, ಎಲ್ಲಾ ಬಾಯಿಗೆ ನೆಂಪು ಬಂತಿಲ್ಲೆದ"

"ಇಷ್ಟೆಲ್ಲಾ ಇಪ್ಪಾಗ ಎಂತಕೆ ಆಸ ಬಡುದು ಬಂಗಾರ, ಸೀರೆ ಮಾಡ್ಸುಲೆ ಹೆರಟಿ?"

"ಅವು ಎಷ್ಟು ಬೇಕಾದರೂ ಹಾಕಲಿಬಿಡ್ಲಿ. ಎಂಗಳ ಕೂಸಿಂಗೆ ಎಂಗೊಗೂ ಹಾಕೇಕು ಹೇಳುವ ಆಶೆ ಇರ್ತಿಲ್ಲೆಯೇ. ಎಂಗಳ ಆತ್ಮತೃಪ್ತಿಗಾಗಿ ಎಂಗಳೂ ರಜಾ ಹಾಕಿದ್ದು ಅದರಲ್ಲಿ ತಪ್ಪೆಂತ ಇದ್ದು ಎಂಕಿ?"

"ತಪ್ಪೆಂತದೂ ಇಲ್ಲೆ ಅಬ್ಬೆ. ಎನಗೆ ಬೇಕಾಗಿ ನಿಂಗೊ ಎಷ್ಟು ಕಷ್ಟ ತಿಂದಿ ಹೇಳುದರ ಜಾನ್ಸಿಯೇ ಕಣ್ಣೀರು ಬತ್ತು. ಅವು ಹಾಕಿದ ಎಲ್ಲಾ ಒಡವೆಂದಲೂ ನಿಂಗೊ ಹಾಕಿದ ಒಂದೆಳೆ ಸರ ಕೊರಳಿಂಗೆ ಭಾರ ಆಗಿ ಕಂಡತ್ತು."

"ಸಾಲವೋ ಸೋಲವೋ ಮಾಡಿ ಎತ್ತಿದ ಜೆಂಬಾರವ ಮಾಡಿ ಮುಗುಶಿದ್ದೇ ಎಂಗೊಗೊಂದು ಸಂತೋಷ. ಯಾವ ಅಡ್ಡಿ ಆತಂಕವೂ ಬಾರದ್ದೆ ಕಳುದತ್ತನ್ನೇ. ಆ ದೇವರಿಂಗೆ ಎಷ್ಟು ಕೈ ಮುಗುದರೂ ಸಾಲ" ಹೇಳಿತ್ತು ಸಾವಿತ್ರಿ. ಅಷ್ಟಪ್ಪಾಗ ಮನೆಯ ಎದುರು ಗೆದ್ದೆ ಹೊಡೇಂದ ಶಾರದ ಬಪ್ಪದು ಕಂಡತ್ತು.

"ಇದಾ ಎಂಕಿ, ನಿನ್ನ ಶಾರದೆ – ಅತ್ತಿಗೆ ಬಂತಾದ. ಆನಿನ್ನು ಒಳ ನೆಡೆತ್ತೆ. ಮಧ್ಯಾಹ್ನದ ಅಡಿಗೆ ಆಯೇಕನ್ನೇ."

"ಆತಬ್ಬೆ, ಆನು ಅತ್ತಿಗೆ ಹತ್ರೆ ಮಾತಾಡ್ಕೊಂಡು ಕೂರುತ್ತೆ. ನೀನು ಕುಜುವೆ ತಾಳು, ತೊಂಡೆಕಾಯಿ ಹುಳಿ, ಮೆಣಸಿನ ಕೊದಿಲೂ ಮಾಡು. ಅತ್ತಿಗ್ಗೆ ಇಷ್ಟ. ಎಡಿಗಾರೆ ಒಂದು ಹೆಸರುಬೇಳೆ ಪಾಯಸಲೂ ಮಾಡಿಕ್ಕು."

"ಪಾಯಸ ಎಂತಕೆ ಎಂಕಿ? ಇಂದೆಂತ ಶಂಕ್ರಾಂತಿಯೋ?

"ಶಾರದೆ, ಅತ್ತಿಗೆ ಎನ್ನ ಮದುವೆಗೆ ಬೈಂದಿಲ್ಲೆನ್ನೆ. ಅದಕ್ಕೆ ಅದೂ ಆನೂ ಎಂದು ಭೇಟಿ ಅಪ್ಪದೋ ಎಂತದೋ? ಇನ್ನು ಅವು ಕಳುಸಿಪ್ಪಾಗಲ್ಲದೋ ಆನು ಇತ್ಲಾಗಿ ಬಪ್ಪದು."

"ಆತು ಎಂಕಿ. ನೀನು ಹೇಳಿದ್ದರ ಎಲ್ಲಾ ಮಾಡುತ್ತೆ? ಅತ್ತಿಗೆ ಹೇಳಿರೆ ನಿನಗೆ ಪಂಚಪ್ರಾಣ ಅಲ್ಲದೋ? ಒಡಹುಟ್ಟಿದ ಅಕ್ಕ ತಂಗಕ್ಕಳ ಹಾಂಗೆ ಬೆಳದವು ನಿಂಗೊ. ಒಂದು ದಿನ ರಜೆ ಸಿಕ್ಕಿದರೂ ಅದು ಇಲ್ಲಿಗೆ ಓಡ್ಯೊಂಡು ಬಕ್ಕು"

ಇಷ್ಟಪ್ಪಾಗ ಶಾರದೆ ಒಳ ಬಂತು. ಅದಕ್ಕೆ ಆಸರಿಂಗೆ ಕೊಟ್ಟತ್ತು ಸಾವಿತ್ರಿ.

"ಎಂತ ಶಾರದೆ ಮನೇಲಿ ಅಬ್ಬೆ ಅಪ್ಪ ಎಲ್ಲಾ ಸೌಖ್ಯಲ್ಲಿ ಇದ್ದವೊ! ಅಬ್ಬೆಯ ಕಾಲು ಬೇನೆ ಹೇಂಗಿದ್ದು ಈಗ?."

"ನಿನ್ನ ದಾರಿ ಕಾದು ಕಾದು ಎಂಕಿಯ ಗೋಣೇ ಮುರುದ್ದತ್ತಾದ. ಇನ್ನು ನೀನೂ ಎಂಕಿಯೂ ಹರಟೆ ಹೊಡೆಯಿ"

"ಅಬ್ಬಗೆ ಕಾಲು ಬೇನೆ ರಜಾ ಗುಣ ಆಯಿದು ಅತ್ತೆ ಈಗ ಅತ್ತಿತ್ತೆ ನೆಡವಲೆ ಎಡಿತ್ತು. ಆನು ನಿನ್ನೆಯೇ ಬತ್ತಿತ್ತೆ. ಅಬ್ಬೆಗೆ ಬೇನೆ ಎಣ್ಣೆ ಕಾಲಿಂಗೆ ತಿಕ್ಕಲೆ ಇತ್ತು. ಹಾಂಗಾಗಿ ತಡವಾತು. ಇಂದು ರಜಾ ಉಷಾರಾಯಿದು. ಅದುವೇ ಹೇಳಿತ್ತು. ನೀನು ಬೇಕಾದರೆ ಎಂಕಿಯ ನೋಡ್ಳೆ ಹೋಗು ಶಾರದೆ. ಮತ್ತೆ ಅದು ನಿನಗೆ ಕಾಂಬಲೆ ಸಿಕ್ಕ ಹೇಳಿತ್ತು. ಹಾಂಗಾಗಿ ಹೆರಟಿಕ್ಕಿ ಬಂದೆ ಅತ್ತೆ."

"ಒಳ್ಳೆದಾತು. ಎಂಕಿಗೆ ನಿನ್ನ ಕಾಣದ್ದೆ ಅಸಕ್ಕ ಹಿಡುದ್ದು. ಎಷ್ಟು ಬೇಕೋ ಅಷ್ಟು ಪಟ್ಟಾಂಗ ಹೊಡಕ್ಕೋಳಿ" ಹೇಳಿಕ್ಕಿ ಸಾವಿತ್ರಿ ಅಟ್ಟುಂಬಳಕ್ಕೆ ಹೋತು. ಶಾರದೆಯ ಬಲಿಗೇಂಡು ಎಂಕಿ ಒಳಾಣ ಕೋಣಗೆ ಹೋತು.

"ಎಂತ ಎಂಕಿ ಅತ್ತಿಗೆ, ಎನಗೆ ಬೇಕಾಗಿ ಕಾದುಕೊಂಡು ಇತ್ತಿದ್ದೆಡಾ" ಕೇಳಿತ್ತು ಶಾರದೆ.

"ಅಪ್ಪು ಶಾರದೆ, ನೀನು ಯಾವಾಗ ಬತ್ತೆ ಹೇಳಿ ದಾರಿ ನೋಡ್ಯೊಂಡು ಇತ್ತಿದ್ದೆ. ಬೇಕಾದವು ಎಲ್ಲೋರೂ ಮದುವೆಗೆ ಬಂದು ಹೋದವು. ಆದರೆ ನೀನು ಮಾಂತ್ರ ಬಯಿಂದಿಲ್ಲೆ. ಹಾಂಗಾಗಿ ರಜಾ ಬೇಜಾರ ಆತು."

“ಎನಗೂ ಬೇಜಾರ ಆಯಿದು. ಎಂಕಿ ಅಂದೇ ಎನ್ನ ಪರೀಕ್ಷೆ ಸುರು ಆಯಿದು. ಅದೂ ಮೆಟ್ರಿಕ್ ಪರೀಕ್ಷೆ ಬಿಟ್ಟಿಕ್ಕಿ ಬಪ್ಪಲೂ ಗೊಂತಿಲ್ಲೆ. ಇಲ್ಲದಿದ್ದರೆ ಆನು ಬಿಡುತ್ತಿತ್ತನೋ. ಹಾರ್‍ರ್ಯೊಂಡು ಬತ್ತಿತ್ತೆ.”

“ಎನಗೆ ಗೊಂತಿತ್ತು. ಆದರೂ ನೀನು ಎನ್ನ ಮದುವೆಯ, ದಿಬ್ಬಾಣ ಬಂದ ಗೌಜಿಯ, ಮದಿಮ್ಮಾಯನ ಎಲ್ಲಾ ನೋಡೇಕಾತು ಹೇಳಿ ಇತ್ತು ಎನ್ನ ಮನಸ್ಸಿಲ್ಲಿ.

“ಎಂತ ಅಷ್ಟು ಗೌಜಿ ಇತ್ತೋ ದಿಬ್ಬಾಣ!”

“ಮತ್ತೆ ಇರುಳು ಕಸ್ತಲಗೆ ಹಿಲಾಲು ದೀವಟಿಗೆ ಹಿಡುದು ಬೇಂಡು, ವಾದ್ಯಲ್ಲಿ ಹನಿಕೂಡೆ ಅಡಿಲಿ ಮದಿಮ್ಮಾಯ ಬಪ್ಪಾಗ ಭಾರೀ ಚೆಂದ ಕಂಡುಗೊಂಡು ಇತ್ತು. ”

“ಎಂತ ದಿಬ್ಬಣ ಬಪ್ಪದರ ನೀನು ನೋಡಿದ್ದೆಯೋ? ಕೂಸು ನೋಡ್ಳಾಗ ಹೇಳಿ ನಿನ್ನ ದೇವರೊಳ ಕೂಸಕೂರ್ಸಿದ್ದವಿಲ್ಲೆಯೋ?”

“ಎಲ್ಲಾ ಕೂರ್ಸಿದ್ದವು. ಎನ್ನ ಅಲಂಕಾರವ ಮುಗುಶಿಕ್ಕಿ ದೇವರ ಮುಂದೆ ಗುಟ್ಟ ದೀಪವ ಹಚ್ಚಿ. ಮೇಲ್ವಾಸನ ಹಾಕಿ ಎನ್ನ ಅಬ್ಬೆಯೂ ಅತ್ತೆಯೂ ಕೂರ್ಸಿದ್ದವು. ಎಂಕಿ, ನೀನು ಇಲ್ಲಿಂದ ಎದ್ದಿಕ್ಕಿ ಹೋಪಲಾಗ. ನೀನಿನ್ನು ಧಾರಗಪ್ಪಾಗ ಕುಞಿ ಮಾವ ಕೈಹಿಡಿದು ಏಳ್ಸಿ ಕರಕ್ಕೊಂಡು ಬಪ್ಪನ್ನಾರ ಹೀಂಗೇ ಕೂದುಕೊಂಡು ಇರೇಕು. ಆತೋ. ಎಂಗೊ ಎಲ್ಲೋರೂ ದಿಬ್ಬಾಣವ ಎದುರುಗೊಂಬಲೆ ಹೋವುತ್ತೆಯೋ’ ಹೇಳಿಕ್ಕಿ ಹೋದವು”

“ಆತು ಹೇಳಿ ತಲಿ ಆಡಿಸಿದೆ. ಒಂದು ನರಪಿಳ್ಳೆ ಹತ್ರೆ ಇಲ್ಲದ್ದ ಹಾಂಗೆ ದಿಬ್ಬಾಣ ಎದುರುಗೊಂಬಲೆ ಹೋದವು. ಎನಗೊಂದು ಸರ್ತಿ ಮದಿಮ್ಮಾಯನ ನೋಡೇಕು ಹೇಳಿ ಆತು. ದಿಬ್ಬಾಣ ಜಾಲಕೊಡಿಂಗೆ ಬಪ್ಪಾಗ ಮೆಲ್ಲಂಗೆ ಎದ್ದು ಗಿಳಿ ಬಾಗಿಲ ಸಂದಿಂದ ಇಣುಕ್ಕಿದೆ.”

“ಹೇಂಗೆ ಮದಿಮ್ಮಾಯ ಚೆಂದ ಇದ್ದನೋ?”

“ಎಂತರ ಹೇಳುದು ಶಾರದೆ? ಕತೇಲಿ ರಾಜಕುಮಾರನ ವರ್ಣನೆ ಇರುತ್ತಿಲ್ಲೆಯೇ? ಹಾಂಗೇ ಕಂಡುಗೊಂಡು ಇತ್ತಿದ್ದವು.

ಬೆಳಿ ಶರೀರ. ಉರುಟುಮೋರೆ. ಶರೀರಕ್ಕೆ ತಕ್ಕ ಅಲಂಕಾರ. ಒಂದೆಳೆ ಜರಿಯ ಕೆಂಪುಪಚ್ಚಯ ಕಚ್ಚೆ ಹಾಕಿ ಸುತ್ತಿದ್ದವು. ಕೊರಳಿಂಗೆ ಏಳೆಳೆಯ ದೊಡ್ಡ ಚಕ್ರಸರ ಹೊಕ್ಕುಳಿಂಗೆ ಮುಡ್ಕೊಂಡು ಇತ್ತು; ಅದರ ಮೇಗೆ ಮೂರ್ತಕ್ಕೆ ಕಟ್ಟಿದ ಹವಳದ ಸರ, ಕೈಗೊಕ್ಕೆ ಬಂಗಾರದ ಕಡಗ, ಬೆಳಿ ಪಟ್ಟೆ ಮುಂಡಾಸಿಂಗೆ, ಮಲ್ಲಿಗೆ ಮುಗುಟಿನ ಮಾಲೆ ಹಾಂಗಿಪ್ಪ ಬಂಗಾರದ ಬಾಸಿಂಗ ಇತ್ತು."

"ಇಷ್ಟೆಲ್ಲಾ ವಿವರ ನೋಡಿದೆಯೋ ಎಂಕಿ ನೀನು. ಆನಿದ್ದರೆ ನಿನ್ನ ಅಲ್ಲಿಂದ ಏಳ್ಳೆ ಬಿಡುತ್ತಿತ್ತಿಲ್ಲೆ."

"ನೀನು ಇತ್ತಿಲ್ಲೆನ್ನೆ, ಹಾಂಗಾಗಿ ಎನಗೆ ಕದ್ದು ನೋಡ್ಳೆ ಒಳ್ಳೆದಾತು. ಅದು ನೋಡಿದ ಮತ್ತೆ ಧಾರೆಗೆ ಇನ್ನೆಷ್ಟು ಹೊತ್ತು ಇದ್ದೊ. ಆನು ಯಾವಾಗ ಮಾದಿಮ್ಮಾಯನ ಕೊರಳಿಂಗೆ ಮಾಲೆ ಹಾಕುದೋ ಹೇಳಿ ಕ್ಷಣ ಗಣನೆ ಮಾಡ್ಕೊಂಡು ಇತ್ತಿದ್ದೆ"

"ಅಂಬಾಗ ನಿನಗೆ ಮದಿಮ್ಮಾಯನ ನೋಡಿ ಖುಷಿ ಆಯಿದು ಅಲ್ಲದೋ ಎಂಕಿ."

"ಅಪ್ಪು ಶಾರದೆ. ಆನು ಹುಟ್ಟಿದ್ದಕ್ಕೆ ಸ್ವಾರ್ಥಕ ಆತ್ ಹೇಳಿ ಕಂಡತ್ತು ಎನ್ನ ಅಪ್ಪ ಎಷ್ಟು ಒಳ್ಳೆ ಮಾಣಿಯ ಹುಡುಕ್ಕಿ ಎನ್ನಕೊಟ್ಟಿದವು ಹೇಳುವ ಸಂತೋಷವೂ ಆತು."

"ಅಂತೂ ತೆರೆ ಸೀರೆ ಸರ್ಸೆಕಾದರೆ ಮದಲೆ ನಿನಗೆ ಗೆಂಡನ ನೋಡಿಯೂ ಆಯಿದು. ಚಿಂತೆ ಇಲ್ಲೆ ಕೂಸು ಉಷಾರಿಯೇ ಇದ್ದು" ಹೇಳಿ ರಜಾ ಕೆಣಕ್ಕಿತ್ತು ಶಾರದೆ.

"ಅಪ್ಪು ಶಾರದೆ. ಮದವೇಂದ ಮದಲೇ ಒಂದಾರಿ ಮಾಣಿಯು ನೋಡೇಕು ಹೇಳಿ ಎನ್ನ ಮನಸ್ಸಿನ ಒಳ ಇತ್ತು. ಹೇಳ್ಳೆ ಧೈರ್ಯ ಸಾಲದ್ದೆ ಸುಮ್ಮನೆ ಕೂದೆ; ಹೇಂಗಿದ್ದವಂಗೆ ಕೊಡುತ್ತವೋ ಎಂತದೋ ಹೇಳುವ ಅಳಕ್ಕೂ ಇತ್ತು."

"ಈಗ ಹಾಂಗಿಪ್ಪ ಹೆದರಿಕೆ ಎಂತದೂ ಇಲ್ಲೆನ್ನೆ. ಒಳ್ಳೆ ರಾಜಕುಮಾರಂಗೇ ನೋಡಿ ನಿನ್ನ ಕೊಟ್ಟವನ್ನೆ."

"ಅಪ್ಪು ಶಾರದೆ. ಎನಗೆ ತುಂಬಾ ತೃಪ್ತಿ ಆಯಿದು."

"ಮತ್ತೆ ಮದುವೆ ಕಳುದಿಕ್ಕಿ ಚತುರ್ಥಿ ಸಟ್ಟು ಮುಡಿವರಗೂ ನಿನ್ನ ಯಜಮಾನ ಇಲ್ಲಿಯೇ ಇತ್ತಿದ್ದಾ ಇಲ್ಲೆಯೇ?"

“ಇತ್ತಿದ್ದವು. ಅಂಬಾಗಂಬಾಗ ಎನ್ನ ಕೆಣಕ್ಕ್ಯೊಂಡು ಇತ್ತಿದ್ದವು” ಇದರ ಹೇಳುವಾಗ ಎಂಕಿಯ ಮೋರೆ ಕೆಂಪು ಅಡರಿತ್ತು.

“ಎಂತ ಮಾಡಿದ.”

ಮದುವೆ ಮರುದಿನ ಅಬ್ಬೆ ಹೇಳಿತ್ತು “ಎಂಕಿ ಇನ್ನು ನಿನ್ನ ಗೆಂಡಂಗೆ ಎಂತ ಬೇಕೋ ಕೇಳಿ ಮಾಡು. ಎಂತ ಬೇಕಾದರೂ ಅವಂಗೆ ಕೊಟ್ಟಗ್ಗೇ ತೆಕ್ಕೊಂಡು ಹೋಗಿ ಕೊಡು” ಹೇಳಿತ್ತು.

“ಆತು ಹೇಳಿದೆ” ಹಾಂಗೆ ಕೊಟ್ಟಗ್ಗೆ ಹೋಗಿ” ನಿಂಗೊಗೆ ಎಂತಾರೂ ಬೇಕೋ ಹೇಳಿ ಮೆಲ್ಲಂಗೆ ಕೇಳಿದೆ.

“ಬೇಕು. ಕೇಳಿದ್ದರ ಕೊಡುವೆಯೋ ‘ಕೇಳಿದವು’. ‘ಕೋಡುತ್ತೆ’ ಹೇಳಿದೆ.”

“ಇಲ್ಲಿ ಹತ್ರಂಗೆ ಬಾ ಹೇಳುತ್ತೆ ಹೇಳಿದವು. ಹತ್ರಕ್ಕೆ ಹೋದ ಕೂಡ್ಳೆ ಪಚಕ್ಕನೆ ಎನ್ನ ಹತ್ರಕ್ಕೆ ಎಳಕ್ಕೊಂಡು ಮೋರೆಗೆ ತುಂಬಾ ಮುದ್ದು ಕೊಟ್ಟವು” ಇಷ್ಟು ಹೇಳೇಕಾರೆ ಎಂಕಿ ನಾಚಿ ನೀರಾತು.

“ಅಂತೂ ಸುರು ಮಾಡಿದ್ದ ಸರಸಲ್ಲಾಪವ ಅಲ್ಲದೋ?”

“ಎನಗೆ ಅವರ ಹತ್ರೆ ಹೋಪಲೆ ಹೆದರಿಕೆ ಸುರುವಾತು.”

“ಹೆದರಿಕೆ ಎಂತಕೆ ಎಂಕಿ? ಹೇಂಗಿದ್ದರೂ ಅವಂಗೆ ನಿನ್ನ ಧಾರೆ ಎರದು ಕೊಟ್ಟದಲ್ಲದೋ? ಈಗ ನೀನು ಅವನ ಸೊತ್ತು ಅಲ್ಲದೋ?

“ಆದರೂ ಶಾರದೆ. ಎಲ್ಯಾರು ಆರಾರು ನೋಡಿದರೋ ಹೇಳಿ”

“ನೋಡಿದರೆ ಎಂತಾತು”

“ನಿನಗೆಂತದೂ ಆಗ. ಎನಗೆ ಜೀವ ಬಾಯಿಗೆ ಬಯಿಂದು”

“ಹತ್ರೆ ಬಂದ ಕೂಡ್ಳೆ ಕೈಹಿಡಿದು ಎಳವದು ಮೋರೆ ತುಂಬಾ ಮುತ್ತು ಕೊಡದು. ಎದಗೆ ಒತ್ತಿ ಹಿಡುಕ್ಕೊಂಬದು ಒಂದೆರಡಲ್ಲ ಕೀಟ್ಳೆ”

“ಅಂತೂ ಒಳ್ಳೆ ರಸಿಕ ರಾಜ ಬಿಡು” ಶಾರದೆ ತಮಾಷೆ ಮಾಡಿತ್ತು.

“ಮತ್ತೆ ಅಷ್ಟೇ ಅಲ್ಲ ಶಾರದೆ”

"ಎಲ್ಲಾ ಹೇಳು ಎಂಕಿ. ಎನಗೂ ಮದುವೆ ಆದ ಮತ್ತೆ ಗೆಂಡ ಎಂತೆಲ್ಲಾ ಮಾಡುಗು ಹೇಳಿ ಗೊಂತಾದ ಹಾಂಗೆ ಆತು"

"ನಿನ್ನ ಹತ್ರೆ ಅಲ್ಲದ್ದೆ ಹೀಂಗಿಪ್ಪದರೆಲ್ಲಾ ಆರ ಹತ್ರೆ ಹೇಳ್ಳಾವುತ್ತು ಶಾರದೆ ಅದಕ್ಕೇ ನಿನ್ನ ದಾರಿಕಾದು ಕೂದ್ದು ಆನು."

"ಆತಂಬಾಗ ಮುಂದಾಣದ್ದು ಹೇಳು"

"ಸಟ್ಟು ಮುಡಿ ದಿಬ್ಬಾಣ ಹೋಪಾಗ ಎರಡು ಬಸ್ಸು. ಒಂದು ಕಾರು ಮಾಡಿದ್ದವು. ಎಷ್ಟು ಬೇಡ ಹೇಳಿದರೂ ಅದರ ಕರ್ಚು ಅವೇ ಕೊಟ್ಟವು. ನೆಂಟರಿಷ್ಟರ, ನೆರೆಕೆರೆಯವರ ಎಲ್ಲಾ ಬಸ್ಸಿಂಗೆ ಹತ್ತುಸಿದವು. ಅಬ್ಬೆ ಅಪ್ಪ ಶ್ಯಾಮ ಹಿಂದಾಣ ಸೀಟಿಲ್ಲಿ ಕೂದವು. ಎಂಗಳ ಇಬ್ರನ್ನೂ ಮುಂದಾಣ ಸೀಟಿಲ್ಲಿ ಕೂರ್ಸಿದವು.

"ಎಂತಾತು? ಮದುಮಕ್ಕಳ ಒಟ್ಟಿಂಗೇ ಕೂರ್ಸುದು ಕ್ರಮ ಅಲ್ಲದೋ?"

"ಒಟ್ಟಿಂಗೇ ಕೂರ್ಸಿದ್ದು ವಿಶೇಷ ಅಲ್ಲ ಶಾರದೆ. ಇವು ಇಲ್ಲಿಂದ ಅಲ್ಲಿವರಗೂ ಎನ್ನ ಚೂಂಟಿಗೊಂಡೂ, ಹೆಗಲ ಮೇಗೆ ಹಿಂದಿಂದ ಕೈ ಹಾಕ್ಯೊಂಡು, ಹೆಗಲಿನ ಪೂಜಿಂಕೊಂಡೂ ಇತ್ತಿದ್ದವು"

"ನೀನು ಬೇಡ ಹೇಳೇಕಾತು? ಸುಮ್ಮನೆ ಕೂರ್ತಿತ; ಎಂತಕೆ ತಳಿಯದ್ದೆ ಕೂದೆ? ನಿನಗೂ ಅದೇ ಬೇಕಾಗಿತ್ತು ಅಲ್ಲದೋ?"

"ಒಂದು ಲೆಕ್ಕಲ್ಲಿ ನೀನು ಹೇಳಿದ್ದು ಸರಿ ಶಾರದೆ. ಎನಗೂ ಖುಷಿ ಆಯ್ಕೊಂಡು ಇತ್ತು. ಹಾಂಗಾಗಿ ಆನೂ ತಡದ್ದಿಲ್ಲೆ ಆದರೂ ಅವು ತೊಡಗೆ ಚೂಂಟಿದ್ದಲ್ಲಿ ಕನಿಷ್ಟೆ ಕಚ್ಚಿ ಹೋಯಿದು. ಭುಜ ಅಮರ್ಸಿದ್ದಲ್ಲಿ ಸೆಳ್ಕೊಂಡು ಇತ್ತು."

"ಇರ್ಲಿ ಬಿಡು ಅದೆಲ್ಲಾ ಅವನ ನೆಂಪಿಂಗೆ ಹೇಳಿ ಮಾಡಿಕ್ಕು"

"ಮತ್ತೆ ನಿನ್ನ ಮನೆ ಶುದ್ಧಿಯೇ ಹೇಳಿದ್ದಿಲ್ಲೆ ನೀನು?"

"ಅದರ ಹೇಳ್ಳೆಂತದಿದ್ದು ಶಾರದೆ, ಎರಡು ಅಂತಸ್ತಿನ ಹಂಚಿನ ಮನೆ ಅದು. ಆನು ಹುಟ್ಟಿದ ಮತ್ತೆ ಹಾಂಗಿಪ್ಪ ಮನೆಯ ಕಂಡಿದಿಲ್ಲೆ. ಒಂದು ಹೊಡೆಂದ ಹೊಕ್ಕರೆ ಇನ್ನೊಂದು ಹೊಡೇಂದ ಹೆರಡ್ಲೆ ಎಡಿತ್ತಿಲ್ಲೆ. ಮನಗೆ ಸುತ್ತವೂ ಪಾಗಾರ ಹಾಕಿದ್ದವು. ಎದುರು ಬಪ್ಪಲೆ ಒಂದು ಬಾಗಿಲು – ಹಿಂದೆ ತೋಟಕ್ಕೆ ಹೋಪಲೆ ಒಂದು ಬಾಗಿಲು. ಸಾಧಾರಣಕ್ಕೆ ಅದರ ಒಳಂಗೆ ಆರಿಂಗೂ ಹೊಕ್ಕಂಬಲೆಡಿಯ.

ಮನೆ ಮುಂದೆ ಹತ್ತು ಮುಡಿ ಬತ್ತ ಹರಗುವಷ್ಟು ದೊಡ್ಡ ಜಾಲಿದ್ದು. ಸುತ್ತು ಎಲ್ಲಾ ನಮೂನೆಯ ಹೂಗಿನ ತೋಟ ಇದ್ದು."

" ನೀನು ವರ್ಣಸುದರ ಕೇಳಿಯೇ ಎನಗೆ ದಂಗಾವುತ್ತು. ಆನೂ ನಿನ್ನ ಸಟ್ಟು ಮುಡಿಗೆ ಬತ್ತಿದರೆ, ನಿನ್ನ ಇಂದ್ರ ಲೋಕವ ನೋಡುತ್ತಿತ್ತೆ ಹೇಳಿ ಆಶೆ ಆವುತ್ತು."

"ಅದಕ್ಕೆ ನೀನೂ ಬರೆಕಾತು ಹೇಳಿ ಇತ್ತು ಶಾರದೆ. ಹೀಂಗಿಪ್ಪದೆಲ್ಲಾ ಹೇಳ್ಳೆ ಎನಗೆ ಆರಿದ್ದವು? ಅಬ್ಬೆ ಹತ್ರ ಹೇಳಿದರೆ ಎಲ್ಲಾ ಹೆಡ್ಡು ಹೆಡ್ಡು ಹೇಳ್ಯೊಂಡು ತಿರುಗೇಡ ಎಂಕಿ' ಹೇಳಿ ಬೈಗು. ಅಪ್ಪನ ಹತ್ರೆ ಮಾತಾಡುವ ಧೈರ್ಯವೇ ಇಲ್ಲೆ. ಶ್ಯಾಮ 'ಸಣ್ಣವ' ಅಲ್ಲದೋ?"

"ಆನು ರಜೇಲಿ ಒಂದಾರಿ ನಿನ್ನ ಮನೆಗೆ ಬತ್ತೆ ಎಂಕಿ. ನಾಲ್ಕು ದಿನ ಇದ್ದು ಎಲ್ಲಾ ನೋಡ್ಯೊಂಡು ಬತ್ತೆ. ಈ ಅನುಪತ್ಯದ ಗಿಡಿಬಿಡಿಲಿ ಎಲ್ಲಾ ನೋಡಿದರೆ ಸರಿ ಆಗ"

"ಖಂಡಿತಾ ಬರೇಕು ಶಾರದೆ."

"ಎಂತಕೋ ಎನಗೆ ಈಗ ಇದು ಎನ್ನ ಮನೆ ಹೇಳಿ ಆವುತ್ತಿಲ್ಲೆ ಕೂದರೆ ನಿಂದರೆ ಅಲ್ಯಾಣದ್ದೇ ನೆಂಪು. ಯಾವಾಗ ಅವು ಬಂದು ಕರಕ್ಕೊಂಡು ಹೋವುತ್ತವೋ ಅಲ್ಲಿ ಓಡಾಡುತ್ತನೋ ಹೇಳಿ ದಿನ ಲೆಕ್ಕ ಮಾಡುದೇ ಕೆಲಸ ಆತು."

"ಆತು ಹೆಚ್ಚು ಹೇಳಿರೆ ಇನ್ನು ಇಪ್ಪತ್ತುದಿನ. ಅಷ್ಟರವರೆಗೆ ಹೇಂಗಾರೂ ತಡಕ್ಕೊ. ಮತ್ತೆ ನಿನ್ನ ಗೆಂಡನೊಟ್ಟಿಂಗೆ ಇಪ್ಪಲಕ್ಕನ್ನೆ. ಕೂಪಿಂಗೆ ಕೈಗೆ ಧಾರೆ ನೀರು ಬಿದ್ದ ಮತ್ತೆ ಅಬ್ಬೆ ಅಪ್ಪನ ಮನೆ ಪರಕೀಯ ಹೇಳಿ ಕಾಂಬದು ಸ್ವಾಭಾವಿಕ. ಹಾಂಗೇ ಆಯಿದು ನಿನಗೆ ಅಷ್ಟೆ."

'ಆದಿಕ್ಕು ಶಾರದೆ! ಇನ್ನೊಂದಾರಿ ನೀನು ಬಪ್ಪಾಗ ಆನು ಅಲ್ಲಿಪ್ಪೆ; ಅಷ್ಟರವರೆಗೆ, ಅವು ಧಾರೆ ಕಳುದ ಮತ್ತೆ ಅವು ಎನ್ನ ಕೈ ಹಿಡುಕ್ಕೊಂಡು ಏಳು ಹೆಜ್ಜೆ ಮಡುಗುಸಿದ್ದು ಅಂಬಾಗಂಬಾಗ ಭಟ್ರು ಹಸ್ತ ಮುಟ್ಟೇಕು ಹೇಳಿದ್ದು ದಾನ ಮಾಡುವಾಗ ಕೈಗೆ ನೀರು ಹಾಕಿದ್ದು. ಲಾಜ ಹೋಮಕ್ಕೆ ಎನ್ನ ಎರಡೂ ಕೈ ಹಿಡಿದ್ದು ಅಂಬಾಗ ಅವರ ತೆಗಲಗೆ ಎನ್ನ ತಲೆತಾಗ್ಯೊಂಡು ಇದ್ದದು ಪ್ರತಿಯೊಂದು ನೆಂಪಾಗ್ಯೊಂಡೇ ಇರ್ತು."

"ಹಾಂಗೇ ನೆಂಪು ಮಾಡ್ಯೊಂಡೇ ಇರು ಅದೇ ಗುಂಗಿಲ್ಲಿ ದಿನ ಹೋಕು ನಿನಗೆ" ಹೇಳಿತ್ತು ಶಾರದೆ.

"ಇನ್ನೂ ನಿಂಗಳ ಪಟ್ಟಾಂಗ ಮುಗುದ್ದಿಲ್ಲೆಯೋ ಕೂಸುಗಳೇ ಅಡಿಗೆ ಮುಗುಶಿ ಅಶನ ಮುಗುಳು ಕಟ್ಟಿಕ್ಕು ಇನ್ನಾದರೂ ಬಂದು ಉಣ್ಣಿ" ಹೇಳಿ ಸಾವಿತ್ರಿ ದಿನಿಗೇಳಿತ್ತು.

ಇಬ್ರೂ ಎದ್ದು ಅಟ್ಟುಂಬಳಕ್ಕೆ ನೆಡದವು. ಸಾವಿತ್ರಿ ಮಗಳು ಹೇಳಿದ ಅಡಿಗೆ ಎಲ್ಲಾ ಮಾಡಿದ್ದು. ಶಾರದೆ ಹೊಟ್ಟೆ ತುಂಬಾ ಉಂಡತ್ತು.

"ಅಡಿಗೆ ಲಾಯಕಾಯಿದು ಅತ್ತೆ. ಕುಜುವೆ ತಾಳು ತುಂಬಾ ಲಾಯಕಾಯಿದು ಹೊಟ್ಟೆ ಬಿರಿವಷ್ಟು ತಿಂದೆ" ಹೇಳಿತ್ತು ಶಾರದೆ.

"ಅದೆಲ್ಲಾ ನಿನಗೆ ಬೇಕಾಗಿಯೇ ಮಾಡಿದ್ದು ಶಾರದೆ" ಎಂಕಿ ಎಂತೆಲ್ಲಾ ಮಾಡೇಕು ಹೇಳಿ ಮದಲೇ ತಾಕೀತು ಮಾಡಿತ್ತು.

"ಅಂಬಾಗ ಎಂಕಿ ಅತ್ತಿಗ್ಗೆ ಎನ್ನ ಮೇಗೆ ಪ್ರೀತಿ ಇದ್ದು ಹೇಳಿ ಆತು" – ಇನ್ನಾನು ಹೆರಡುತ್ತೆ ಅತ್ತೆ.

"ಅಷ್ಟು ಅಮ್ಸರ ಏಂತ ಕೂಸೆ ನಿನಗೆ. ಒಳ್ಳೆ ಕೆಸವಿನ ಕಾಲಿಂಗೆ ಕಂಜಿ ಕಟ್ಟಿದ ಹಾಂಗೆ ಮಾಡುತ್ತೇ? ನಾಳಂಗೆ ಉದಿಯಪ್ಪಾಗ ಹೋಗು" ಹೇಳಿತ್ತು ಸಾವಿತ್ರಿ.

"ಇಲ್ಲೆತ್ತೆ. ಅಬ್ಬಗೂ ಎಡಿತ್ತಿಲ್ಲೆನ್ನೆ. ಕಾಲು ಬೇನೆ ಕೈ ಬೇನೆ ಹೇಳಿ ಅಸಬಡಿತ್ತು. ರಜೇಲಿ ಆದರೂ ಅದಕ್ಕಿಷ್ಟು ಆಸರೆ ಆಗದಿದ್ದರೆ ಹೇಂಗೆ? ಆನು ಎಂಕಿ ಹೋಯೇಕಾರೆ ಮದಲೆ ಇನ್ನೊಂದಾರಿಬತ್ತೆ" ಹೇಳಿ ಕಾಫಿ ಕುಡುದಿಕ್ಕಿ ಹೆರಟಿತ್ತು.

"ಎಂಕಿಯ ದಿಂಡಿನ ಹೋಮಕ್ಕೆ ಹೇಳಿ ಕಳುಸುತ್ತೆ. ಅಬ್ಬಗೂ ಹೇಳು. ನೀನೂ ಬಾ" ಹೇಳಿತ್ತು ಸಾವಿತ್ರಿ.

"ಆತತ್ತೆ. ಅಂಬಾಗ ಆನೂ ಮನೇಲಿಪ್ಪೆ. ಬತ್ತೆಯೊ" ಹೇಳಿಕ್ಕಿ ಊರಿಂಗೆ ಹೆರಟತ್ತು ಶಾರದೆ.

"ರಜಾ ಹೆಸರುಬೇಳೆ ಪಾಯಸವ ಹಿಡುಕ್ಕೋ ಶಾರದೆ. ನಿನ್ನ ಅಬ್ಬಗೂ ತುಂಬಾ ಪ್ರೀತಿ ಅಲ್ಲದೋ. ಹಾಂಗೇ ಈ ಚೀಲಲ್ಲಿ ರಜಾ ಮೆಡಿ ಉಪ್ಪಿನಕಾಯಿ

ಯನ್ನೂ ಮಾಂಬಳವನ್ನೂ ಮಡುಗಿದ್ದೆ. ತೆಕ್ಕೊಂಡು ಹೋಗು. ಹೇಳಿ ಸಾವಿತ್ರಿ ಅದರ ಕೈಗೆ ಒಂದು ಚೀಲವನ್ನೂ ಕೊಟ್ಟತ್ತು. ಶಾರದೆ ಎಲ್ಲಾ ತೆಕ್ಕೊಂಡು ಹೋತು.

ಎಂಕಿ ಹೆರ ಕೂಪಲೆ ಕಾದುಗೊಂಡು ಇತ್ತು.

ಅಂದಿಂಗೆ ಸರಿಯಾಗಿ ಇಪ್ಪತ್ತನೇ ದಿನಕ್ಕೆ ಹೆರಗಿದ್ದೂ ಕೂದತ್ತು. ಅದರ ಪುಟ್ಟು ಮಾವನ, ಮಂಚಿಗೆ ಸಮಾಚಾರ ಹೇಳಿಕ್ಕಿ ಬಪ್ಪಲೆ ಕಳುಸಿದವು. ಅವ ಅಲ್ಲಿಗೆ ಹೋಗಿ ಬಂದು ಹೇಳಿದ "ಈ ಸರ್ತಿ ದಿಂಡಿನ ಹೋಮ ಮಾಡ್ಳೆ ಮೂರ್ತ ಸರಿ ಇಲ್ಲೆಡ. ಮುಂದಾಣ ಮಟ್ಟಿಂಗೆ ಮಾಡುವೋ ಹೇಳಿದವಾಡ."

ಎಂಕಿಯ ಎದೆ ಧಸಕ್ಕೆ ಹೇಳಿತ್ತು. ಇನ್ನೂ ತಿಂಗಳು ಕಾಯೇಕನ್ನೆ ಹೇಳಿ ಅಸಬಡುದತ್ತು. ಮತ್ತೂ ಎರಡು ಮೂರು ಸರ್ತಿ ಹೆರಗಿದ್ದು ಕೂದಿಪ್ಪಗಳೂ, ಏನಾದರೊಂದು ಹಾರಿಕೆಯ ಉತ್ತರ ಬಪ್ಪಲೆ ಸುರುವಾತು. ಎಂತ ಸಂಗತಿ ಹೇಳಿ ವಿಚಾರ್ಸಲೆ ಪುರುಷ ಮಾವನನ್ನೇ ಕೊಟ್ಟು ಕಳುಸಿದವು. ಅವ ಅಲ್ಲಿಗೆ ಹೋದವ ಕೇಶವನ ಹತ್ರೆ ಎಲ್ಲಾ ಸಂಗತಿಯ ವಿವರ ತಿಳುಕ್ಕೊಂಡು ಬಂದ.

ಮದುವೆ ಸಟ್ಟು ಮುಡಿ ಕಳುದ ಮೇಗೆ. ರಾಮಚಂದ್ರ ಅವನ ದೋಸ್ತಿಗ ಳೊಟ್ಟಿಂಗೆ ಪದೇ ಪದೇ ಕೊಡೆಯಾಲಕ್ಕೆ ಹೋಪಲೆ ಸುರು ಮಾಡಿದಾಡ. ಅಲ್ಲಿ ಅವಂಗೊಂದು ದಾಸೆತ್ತಿಯ ಪರಿಚಯ ಆತಾಡ. ಅದು ಅವನ ತೆಕ್ಕೆಗೆ ಬಿದ್ದತ್ತಾಡ.

ಒಂದೊಂದಾರಿ ಎಂಟು ದಿನವರೆಗೂ ಕೊಡೆಯಾಲಲ್ಲೇ ಠಿಕಾಣಿ ಹೂಡ್ಯೊಂಡು ಇತ್ತಿದ್ದಾಂಡ.

"ಕೂಸು ಹೆರಗಿದ್ದು ಕೂಯಿದಾಡ. ದಿಂಡಿನ ಹೋಮ ಯಾವಾಗ ಹೇಳಿ ಕೇಳ್ಳೆ ಅದರ ಸೋದರ ಮಾವ ಬಯಿಂದ ಹೇಳಿ ಅವನ ಅಬ್ಬೆ ಹೇಳಿತ್ತಾಡ."

"ಸದ್ಯಕ್ಕೆ ದಿಂಡಿನ ಹೋಮವೂ ಬೇಡ. ಆ ಕೊತ್ತಾಳಿಕೆ ಹಾಂಗಿಪ್ಪದರ ಮನಗೆ ಎಳಕ್ಕೊಂಡು ಬಪ್ಪದೂ ಬೇಡ ಹೇಳಿದಾಡ."

"ಅದು ಮನಗೆ ಬಾರದ್ದೆ ಇನ್ನಾರು ಬಪ್ಪದೋ? ದಿಂಡಿನ ಹೋಮವ ಆದಷ್ಟು ಬೇಗ ಮುಗುಶುವೊ? ಹೇಳಿತ್ತಡ ಅಬ್ಬೆ ಎನಗೆ ಆ ಕೂಸು ಬೇಡ್ಳೇ ಬೇಡ. ಅದು ನೀನು ಅಜಪ್ಪಿ ತಂದದಲ್ಲದೋ? ನೀನೆ ಮಾಡಿಕ್ಕೊ ಆನು ಎನಗೆ ಬೇಕಾದ್ದರೆ ಹುಡುಕ್ಕಿ ತೆಕ್ಕೊಂಡು ಬಪ್ಪೆ ಆ ಕುರುಪ್ಪು ನಿನಕಾದು' ಹೇಳಿದಾಡ.

"ನಿನಗೆ ಧಾರೆ ನೀರು ಕೈಗೆ ಬೀಳುವನ್ನ ಮದಲೆ ಹೇಳ್ಳೆ ನಾಲಗೆ ಇಳುದ್ದೊ? ಮುಂದೆ ಆ ಕೂಸಿನ ಗತಿ ಎಂತದು? ಸುಖಾಸುಮ್ಮನೆ ಒಂದು ಕೂಸಿನ ಕೊರಳು ಕ್ಕೊಯ್ದೆನ್ನೆ. ಈ ಪಾಪ ನಿನಗೆ ಏಳೇಳು ಜನ್ಮಕ್ಕೂ ಹೋಗ. ನೆಂಪು ಮಡಿಕ್ಕೊ" ಹೇಳಿ ನಿನ್ನ ಅತ್ತ್ಯೋರು ಬೈದತ್ತಾಡ.

"ಎಂತ ಬೇಕಾದರೂ ಆಗಲಿ. ಆನು ಅದರ ಕರಕ್ಕೊಂಡು ಬತ್ತಿಲ್ಲೆ. ನೀನೇ ಅದರ ಮಡಿಕ್ಕೊ. ಎನಗೆ ಬೇಕಾದ್ದರ ಕರಕ್ಕೊಂಡು ಆನು ಮನೆ ಹೊಗುಶುವೆ" ಹೇಳಿ ವಾದ ಮಾಡಿದಾಂಡ.

ಹಾಂಗೇ ಒಂದಾರಿ ಆ ದಾಸತ್ತಿಯ ಹೊತ್ತಂಡು ಮನೆ ನುಗ್ಗುಸಿದಾಂಡ. ಅದರ ನೋಡಿದ್ದೇ ನಿನ್ನ ಅತ್ತಗೆ ಉರಿದರುಸಿತ್ತಾಡ.

"ಈ ಬೆಳಿ ಜಿರಳೆಗೆ ಬೇಕಾಗಿ, ಆ ಕೂಸಿನ ಬೊಜ್ಜ ಮಾಡಿದ್ದಿಯೋ ನೀನು? – ಇಂದಿಂದ ಆನು ಆ ಮನೆಯ ಹೊಸ್ತಿಲು ಮೆಟ್ಟೆ" ಹೇಳಿ ಹೆರ ಹೋದ್ದು – ಇಂದಿನವರೆಗೂ ಮನೆಗೆ ಬಯಿಂದಿಲ್ಲೆಡ. ಅಲ್ಲೇ ಹತ್ರೆ ಎಲ್ಲಿಯೋ ಬಿಡಾರ ಮಾಡಿ ಒಂಟಿಯಾಗಿ ಬದಕ್ಕುತ್ತಾಡ.

ಇಷ್ಟೆಲ್ಲಾ ಕೇಳಿದ ಕೂಡ್ಲೆ ಸಾವಿತ್ರಿ ಚಿರ್ರನೆ ಕೂಗಲೆ ಸುರು ಮಾಡಿತ್ತು.

"ಅವಕ್ಕೆ ಕೊರಳು ಕೊಯ್ಯಕಾರೆ ಎನ್ನ ಕೂಸೇ ಆಯೇಕಾತೊ? ಎನ್ನ ಎಂಕಿಯ ಗತಿ ಎಂತದು? ಸಾವನ್ನಾರವೂ ಅದು ಗೆಂಡ ಇದ್ದ ಮುಂಡೆ ಆಯೆಕನ್ನೆ. ಎಂಗಳ ಕರುಳ ಉರುಶಿದ ಅವ ನರಳಿ ಸಾಯಲಿ" ಹೇಳಿ ಕಣ್ಣೀರು ಹಾಕಿತ್ತು.

ಎಂಕಿಯ ಅಪ್ಪನೂ ತಲೆಗೆ ಕೈ ಮಡಿಕ್ಕೊಂಡು ಮೂಲೆ ಸೇರಿದ. ಎಂಕಿಯ ನೋಳು ಕೇಳ್ಳೆ ಆರೂ ಇತ್ತಿದ್ದವಿಲ್ಲೆ. ಅದು ದೇವರೊಳ ಹೋಗಿ ಬಿಕ್ಕಿ ಬಿಕ್ಕಿ ಕೂಗಿತ್ತು. ಕಣ್ಣೀರು ಕೋಡಿ ಹರುಶಿತ್ತು. ಬರೇ 'ದಿಬ್ಬಾಣ ನೋಡ್ಳೆ ಮಾಂತ್ರ ಎನ್ನ ತಲೆಲಿ ದೇವರು ಬರದ ಹಾಂಗೆ ಆತನ್ನೆ. ಎನ್ನ ಕನಸಿನ ಮನೆ ಮುರುದು ಬಿತ್ತನ್ನೆ? ಆನಿನ್ನು ಸಾವನ್ನಾರವೂ ಇಲ್ಲಿಯೇ ಕೊಳಕ್ಕೊಂಡು ಇರೇಕಾತನ್ನೆ? ಮದುವೆ ಮಾಡಿಕೊಟ್ಟರೂ ಅಬ್ಬೆ ಅಪ್ಪಂಗೆ ಎನ್ನ ಭಾರ ಕಮ್ಮಿ ಆಯಿದಿಲ್ಲೆನ್ನೆ' ಹೇಳಿ ಒಂದೇ ಸವನೆ ದುಃಖಿಸಿತ್ತು. ಎರಡು ಮೂರು ದಿನ ಅಶನ ನೀರು ಬಿಟ್ಟತ್ತು; ಅದರ ಅವಸ್ಥೆ ಕಂಡು ಅಬ್ಬೆ ಅಪ್ಪಂಗೆ ತಡವಲೆಡಿಯದ್ದಾತು.

"ಮಗಳೋ, ಶ್ಯಾಮನ ಹಾಂಗೆ ನೀನೂ ಒಬ್ಬ ಮಗ ಹೇಳಿಯೇ ಗ್ರಹಿಸುತ್ತೆ. ಇಂಥಾ ಘಟಿಂಗ ಹೇಳಿ ಗೊಂತಿದ್ದರೆ ಕಂಡಿತಾ ನಿನ್ನ ಅಲ್ಲಿಗೆ ಕೊಡುತ್ತಿತ್ತಿಲ್ಲೆ.

ಮಗಳೇ. ಸುಖಾ ಸುಮ್ಮನೆ ನಿನ್ನ ಕೈಕಾಲು ಕಟ್ಟಿ ಹೊಳಗೆ ಹಾಕಿದ ಹಾಂಗೆ ಆತು" ಅವರ ಡೌಲು ಆಡಂಬರ ದೊಡ್ಡಸ್ತಿಗೆ ನೋಡಿ ಮರುಳಾದೆ. ಎನ್ನ ಎಂಕಿ ಸುಖಲ್ಲಿ ಇಕ್ಕು ಹೇಳಿ ಕನಸು ಕಂಡೆ ಎಲ್ಲಾ ನುಚ್ಚು ನುರಿ ಆತು ನಿನಗೆ ಅನ್ಯಾಯ ಮಾಡಿದ ಹಾಂಗೆ ಆತು" ಹೇಳಿ ಅದರ ಅಪ್ಪನೂ ಕಣ್ಣಿಲ್ಲಿ ನೀರಿಳಿಶಿ, ಬೈರಾಸಿನ ಕೊಡಿಂದ ಒರಸಿಗೊಂಡು ಅಬ್ಬೆ ಅಪ್ಪ ಇಬ್ರೂ ತನಗಾಗಿ ಕಣ್ಣೀರು ಸುರುಸುದರ ನೋಡಿ ಎಂಕಿಯೇ ಎದ್ದು ಮೋರೆ ತೊಳದಿಕ್ಕಿ ಬಂದು ಅವರ ಸಮಾಧಾನ ಮಾಡಿದ್ದು.

"ಆದ್ದು ಆಗಿ ಹೋತು. ಎಲ್ಲಾ ಒಂದು ನಾಟಕಲ್ಲಿ ನಡದ ಹಾಂಗ ಆತು. ನಿಂಗೊ ಇನ್ನು ದುಃಖಿಸೇಡಿ. ಆನು ಹೇಂಗಾರೂ ಸಹಿಸಿಗೊಂಬೆ. ನಿಂಗಳೊಟ್ಟಿಂಗೆ ಇರುತ್ತೆ. ಹೇಂಗೋ ಆವುತ್ತು ಬದುಕ್ಕು. ಎನಗೆ ಬೇಕಾಗಿ ನಿಂಗೊ ಅಶನ ನೀರು ಬಿಡೇಡಿ ಏಳಿ ಹೋಗಿ ಒಂದು ತುತ್ತು ಬಾಯಿಗೆ ಹಾಕ್ಯೊಂಬ" ಹೇಳಿತ್ತು.

ಮಗಳ ಹೇಳಿದ್ದರ ಕೇಳಿ ಅವಕ್ಕೆ ಸಮಾಧಾನ ಆತು. ಮೂರ ಜೆನವೂ ಎದ್ದು ಮಾತಿಲ್ಲದ್ದೆ ಉಂಡು ಮುಗುಶಿದವು.

"ಅಪ್ಪಾ ಇನ್ನು ಆ ನಾಯಿ ಶುದ್ದಿಗೆ ಹೋವುತ್ತಿಲ್ಲೆ ಹೇಳಿ ಪ್ರಮಾಣ ಮಾಡಿ." ಹೇಳಿತ್ತು ಎಂಕಿ. ಅದರ ಮನಸ್ಸಿಂಗೆ ಎಂಥಾ ಗಾಯ ಆಯಿದು ಹೇಳಿ ಅವಕ್ಕೆ ಅದರ ಮಾತಿಂದ ಅರ್ಥ ಆತು.

"ಇಲ್ಲೆ ಮಗಳೆ ಇನ್ನು ಅವ ನಮ್ಮ ಪಾಲಿಂಗೆ ಸತ್ತ ಹಾಂಗೆ" ಹೇಳಿದವು.

ಐದಾರು ತಿಂಗಳು ಕಳುದರೂ ದಿಂಡಿನ ಹೋಮದ ಹೇಳಿಕೆ ಬಾರದಿಪ್ಪಾಗ ಶಾರದೆ ಅದರ ಅಬ್ಬೆಯ ಕೇಳಿತ್ತು.

"ಅಬ್ಬೆ, ಎಂಕಿಯ ದಿಂಡಿನ ಹೇಳಿಕೆ ಬಯಂದಿಲ್ಲೆಯೋ?

"ಇಲ್ಲೆ ಶಾರದೆ. ಬಹುಶ್ಯ ಅವು ದಿಂಡಿನ ಹೋಮ ಹೇಳಿ ಶಾಸ್ತ್ರಕ್ಕೆ ಮಾಡಿಕ್ಕು. ಆರಿಂಗೂ ಹೇಳಿರವು. ಅದು ಮದಲೇಯೇ ನೆರದ ಕೂಸಲ್ಲದೋ? ಹಾಂಗಾಗಿ ಅಬ್ಬರಕ್ಕೆ ಮಾಡಿರವು" ಹೇಳಿತ್ತು ಶಾರದೆಯ ಅಬ್ಬೆ.

"ಆದಿಕ್ಕು ಅಬ್ಬೆ ಇಲ್ಲದಿದ್ದರೆ ಅತ್ತೆ ಹೇಳಿ ಕಳುಸುತ್ತೆ ಹೇಳಿದ್ದು" ಹೇಳಿ ಅಲ್ಲಿಗೆ ಮಾತು ಮುಗುಶಿತ್ತು.

ಶಾರದೆ ಕೊಡೆಯಾಲಕ್ಕೆ ಕಲಿವಲೆ ಹೋತು ಅಲ್ಲಿಯ ಪ್ರಸಿದ್ಧ ಮಾಸ್ತ್ರಿಗಳ ಕಾಲೇಜಿಂಗೆ ಸೇರಿತ್ತು.

ಒಂದೊರ್ಷ ಆದ ಮತ್ತೆ ಊರಿಂಗೆ ರಜಿಗೆ ಬಂದದು. ಅಜ್ಜನ ಮನಗೂ ಬಂತು. ಎಂಕಿ ಅಲ್ಲಿದ್ದರ ನೋಡಿ ಆಶ್ಚರ್ಯ ಆತು.

"ಎಂತ ಎಂಕಿ ಬಜ್ಜಿದ್ದೆ? ಯಾವಾಗ ಇತ್ಲಾಗಿ ಬಂದದು? ಎಂತಾರೂ ವಿಶೇಷ ಇದ್ದೊ?" ಹೇಳಿ ನೆಗೆ ಮಾಡ್ಯೊಂಡೇ ಕೇಳಿತ್ತು ಶಾರದೆ.

"ವಿಶೇಷ ಇದ್ದು ಶಾರದೆ. ಎನ್ನೊಟ್ಟಿಂಗೆ ಬಾ ಎಲ್ಲಾ ಹೇಳುತ್ತೆ" ಹೇಳಿ ನಿಜ ಸಂಗತಿಯ ಮುಚ್ಚುಮರೆ ಇಲ್ಲದ್ದೆ ಹೇಳಿತ್ತು. ಅದರ ಕೇಳಿ ಶಾರದೆಗೆ ತುಂಬಾ ದುಃಖ ಆತು.

"ಎನಗೆ ಗೊಂತಿಲ್ಲದ್ದೆ ಕೇಳಿದೆ ಎಂಕಿ. ಬೇಜಾರ ಮಾಡೇಡ ಆತೋ" ಹೇಳಿ ಶಾರದೆ ಕಣ್ಣೊರೆಸಿತ್ತು.

"ಶಾರದೆ ಎನಗಿನ್ನು ಎಂತಾದರೂ ಬದುಕ್ಕುವ ದಾರಿಯ ತೋರ್ಸು. ಎನ್ನ ಕಾಲ ಮೇಗೆ ನಿಂಬ ಹಾಂಗೆ ಆಯೇಕು. ಆನು ಕಲ್ತದು ಖರೇ ಐದನೇ ಕ್ಲಾಸು ಹೇಳುದರ ಮರೇಡ."

"ಕೊಡೆಯಾಲಲ್ಲಿ ಒಂದು 'ಅಬಲಾಶ್ರಮ' ಹೇಳಿ ಇದ್ದು ಅಲ್ಲಿ ಗೆಂಡ ಬಿಟ್ಟವಕ್ಕೆ, ವಿಧವೆಗೊಕ್ಕೆ, ಅತ್ಯಾಚಾರಕ್ಕೆ ಒಳಗಾದವಕ್ಕೆ ಟ್ರೈನಿಂಗು ಕೊಡುತ್ತವು. ಎನಗೆ ಅಲ್ಯಾಣ ವಾರ್ಡನ್ನಿನ ಗುರ್ತ ಇದ್ದು. ಅದು ಎನ್ನ ಗೆಳತಿ ಸುನಂದನ ಕಿರಿಯಬ್ಬೆ. ಅಲ್ಲಿ ಕೂಸುಗೊಕ್ಕೆ ಅವರ ಯೋಗ್ಯತೆಗೆ ತಕ್ಕ ಹಾಂಗೆ ತರಬೇತಿಗೆ ಕಳುಸುತ್ತವು.

ಮೆಟ್ರಿಕ್ ಕಲ್ತವಾದರೆ ಮಾಷ್ಟ್ರತ್ತಿಗೆಯ ಟ್ರೈನಿಂಗು ಕೊಡುಸಿ ಯಾವುದಾದರೂ ಶಾಲೆಲಿ ಉದ್ಯೋಗವನ್ನು ಕೊಡುಸುತ್ತವು. ರಜಾ ಕಲ್ತವಾದರೆ ಹೊಲಿಗೆ ಹೇಳಿ ಕೊಡುತ್ತವು. ಏನೂ ವಿದ್ಯೆ ಇಲ್ಲದ್ದವಾದರೆ, ಹಪ್ಪಳ ಸಂಡಿಗೆ, ಕಾರಪುಡಿ, ಮಸಾಲೆ ಪುಡಿ, ಮಾಡುದರ ಕಲುಶುತ್ತವು. ಹೇಂಗಾದರೂ ನಿನಗೊಂದು ಬದುಕ್ಕುವ ದಾರಿ ಕಾಂಗು. ನೀನು ಎನ್ನೊಟ್ಟಿಂಗೆ ಬಾ ಎಂಕಿ" ಹೇಳಿತ್ತು ಶಾರದೆ.

"ನೀನು ಎನ್ನ ಅಪ್ಪನ ಹತ್ರೆ ಕೇಳು ಶಾರದೆ. ಅವು ಹೂಂ ಹೇಳಿರೆ ಕಂಡಿತಾ ಆನು ಬತ್ತೆ" ಹೇಳಿತ್ತು ಎಂಕಿ.

"ಆತು, ಆನು ಮಾವನ ಹತ್ರೂ ಅತ್ತೆಯ ಹತ್ರೂ ಮಾತಾಡ ಒಪ್ಪುಸುತ್ತೆ" ಹೇಳಿ ಶಾರದೆ ಅವರ ಹತ್ರ ಮಾತಾಡ್ಳೆ ಹೋತು. ಸುರುವಿಲ್ಲಿ "ಅದೆಲ್ಲಾ ಎಂತಕೆ?

ಎಂಗೊ ಜೀವಂತ ಇಲ್ಲೆಯೋ? ಎಂಗೊ ಕೂಳು ತಿಂದರೆ ಅದಕ್ಕೂ ಒಂದು ಮುಷ್ಟಿ ಹಾಕುವೆಯೋ?" ಹೇಳಿ ಎಲ್ಲಾ ವಾದ ಮಾಡಿದವಾಡ.

"ನಿಂಗೊ ಕೂಳು ಹಾಕಿ ಹೇಳಿ ಅಲ್ಲ ಮಾವ. ನಿಂಗೊ ಇಪ್ಪನ್ನಾರ ನೋಡ್ಯೊಂಬಿ. ಸತ್ತ ಮತ್ತೆ ಆರು ನೋಡುಗು? ನಾಳಂಗೆ ಶ್ಯಾಮ ಮದುವೆ ಆಗಿ ಹೆಂಡತಿಯ ಮನಗೆ ತಕ್ಕು. ಅಂಬಾಗಾಣ ಪರಿಸ್ಥಿತಿ ಹೇಂಗಾವುತ್ತೋ ಆರಿಂಗೆ ಗೊಂತು. ಅದರಂದ ಮದಲೇ ಆಲೋಚನೆ ಮಾಡಿ, ಎಂಕಿ ಸ್ವಂತ ಕಾಲಮೇಗನಿಂಬ ಹಾಂಗೆ ಮಾಡುದೇ ಒಳ್ಳೆದಲ್ಲದೋ? ಹೇಂಗೂ ಅದಕ್ಕೆ ಐದನೇ ಕ್ಲಾಸು ಆಯಿದು. ಹೊಲಿಗೆ ಕ್ಲಾಸಿಂಗೆ ಸೇರ್ಲಕ್ಕು. ಆರು ತಿಂಗಳು ಕಲ್ತರೆ ಬೇಕಾದ್ದೆಲ್ಲಾ ಹೊಲಿವಲೆಡಿಗೂ. ಅದರ ಅಶನ ಅದು ನೋಡ್ಯೊಂಗು."

"ಅದಕ್ಕೆಷ್ಟು ಕರ್ಚು ಆವುತ್ತೋ? ಮದುವೆಗೆ ತೆಗೆದ ಸಾಲ ಇನ್ನೂ ಮುಗುದ್ದಿಲ್ಲೆ" ಆತಂಕಲ್ಲಿ ಹೇಳಿದ ಅದರಪ್ಪ

"ಕರ್ಚು ಎಂತದೂ ಇಲ್ಲ ಮಾವ, ಅಲ್ಲಿಗೆ ಹೋಪಲೆ ಬಪ್ಪಲೆ ಕರ್ಚ ಮಾಂತ್ರ ನೋಡ್ಯೊಂದರೆ ಆತು; ಊಟ, ತಿಂಡಿ ವ್ಯವಸ್ಥೆ ಎಲ್ಲಾ ಅವೇ ನೋಡ್ಯೋಳ್ತವು. ಕಲ್ತ ಮತ್ತೆ ಒಂದು ಹೊಲಿಗೆ ಮೆಶಿನು ತಂದು ಕೊಟ್ಟಕ್ಕಿ. ಅದು ಹೊಲದು ಸಂಪಾದನೆ ಮಾಡ್ಯೊಂಗು. ಅದರಷ್ಟಕ್ಕೆ ಬದುಕ್ಕುಗು" ಹೇಳಿತ್ತು ಶಾರದೆ.

ಅಬ್ಬೆ ಅಪ್ಪ ಇಬ್ರೂ ಸುಮಾರು ಹೊತ್ತು ಮಾತಾಡ್ಯೊಂಡು ಕಡೇಂಗೆ ಒಪ್ಪಿಗೆ ಕೊಟ್ಟವು.

"ಎಂಕಿಗೂ ರಜಾ ದುಃಖ ಮರವಲೆ ಆನು ಆವುತ್ತು. ಅದಕ್ಕೆ ಮನಸ್ಸಿದ್ದರೆ ಕರಕ್ಕೊಂಡು ಹೋಗು ಶಾರದೆ" ಹೇಳಿದವು.

ಎಂಕಿ ಕೊಡಿಯಾಲಕ್ಕೆ ಹೋಪಲೆ ತಯಾರಾಗಿ ನಿಂದತ್ತು. ಒಂದೆರಡು ನಿತ್ಯಸುತ್ತುವ ಸೀರೆ ರವಕೆ ಚೆಂಡಿ ಹರುಕ್ಕು ಹಾಸುದು ಹೊದವದು ತೆಕ್ಕೊಂಡ ಆಶ್ರಮಕ್ಕೆ ಹೋತು. ಆಶ್ರಮದ ವಾರ್ಡನಿಂಗೆ ಅದರ ಕತೆ ಎಲ್ಲಾ ಮದಲೇ ಗೊಂತಿದ್ದ ಕಾರಣ ಅಲ್ಲಿ ಸೇರ್ಸುಲೆ ಕಷ್ಟ ಆಯಿದಿಲ್ಲೆ. ಮರುದಿನಂದಲೇ ಎಂಕಿ ಹೊಲಿಗೆ ಕಲಿವಲೆ ಸುರು ಮಾಡಿತ್ತು. ಮತ್ತೆ ಲಂಗ ರವಕ್ಕೆ ಹೊಲಿವದೂ ಕಲ್ತತ್ತು. ಅದರ ಹಾಂಗಿಪ್ಪವು ನೂರಕ್ಕೂ ಹೆಚ್ಚು ಕೂಸುಗೊ ಅಲ್ಲಿತ್ತಿದ್ದವು. ಅದರಿಂದಲೂ ದಾರುಣ ಸ್ಥಿತಿಲಿ ಇದ್ದವರ ಕತೆ ಕೇಳಿ ಅವರಿಂದ ತಾನೇ ಉತ್ತಮ ಸ್ಥಿತಿಲಿ ಇದ್ದೆ ಹೇಳಿ ಕಂಡತ್ತು ಆರು ತಿಂಗಳಿಂಗೆ ಹೊಲಿಗೆ ಪರೀಕ್ಷೆ ನೆಡದತ್ತು ಎಂಕಿ ಅದರಲ್ಲಿ ಪಾಸಾತು. ಅದರ ವಾರ್ಡನಿಂಗೂ ಕುಶಿ ಆತು.

“ವೆಂಕಟೇಶ್ವರಿ (ವೆಂಕಿಯ ಹೆಸರು) ನೀನಿನ್ನು ಮನೆಗೆ ಹೋಗಬಹುದು – ಮನೆಯಲ್ಲಿಯೇ ಒಂದು ಹೊಲಿಗೆ ಮೆಶಿನು ಇಟ್ಟುಕೊಂಡು ಬಟ್ಟೆ ಹೋಲಿಯಲಿಕ್ಕೆ ಸುರು ಮಾಡು ಅತ್ತು ಕರೆದು ಜೀವನವನ್ನು ಹಾಳು ಮಾಡಬೇಡ. ಅದರಿಂದ ಯಾವ ಉಪಯೋಗವೂ ಇಲ್ಲ. ಜೀವನದಲ್ಲಿ ಧೈರ್ಯವೇ ಮುಖ್ಯ. ನಿನಗೆ ಬೇರೇನಾದರೂ ಸಹಾಯ ಬೇಕಿದ್ದರೆ ಇಲ್ಲಿಗೆ ಬಾ. ನನ್ನಿಂದ ಆದಷ್ಟು ಸಹಾಯ ಮಾಡುತ್ತೇನೆ ಆಯಿತೋ. ದೇವರು ನಿನಗೆ ಒಳ್ಳೆದು ಮಾಡಲಿ’ ಹೇಳಿ ಹರಸಿ ಕಳುಸಿತ್ತು.

ಶಾರದೆ ಅದರ ಕರಕ್ಕೊಂಡು ಮನೆಗೆ ಬಿಟ್ಟತ್ತು.

“ಮಾವ, ಎಲ್ಲಾದರೂ ಒಂದು ಹಳೆ ಹೊಲಿಗೆ ಮೆಶಿನು ಇದ್ದರೆ ಎಂಕಿಗೆ ತೆಗೆದುಕೊಡ. ಅದು ಹೊಲುದು ಜೀವನ ಮಾಡುಗು” ಹೇಳಿತ್ತು ಶಾರದೆ.

ಅದರ ಅಪ್ಪ ಮರುದಿನವೇ ಎಂಕಿಗೆ ಒಂದು ಹಳೆ ಹೊಲಿಗೆ ಮೆಶಿನು ತಂದು ಕೊಟ್ಟ. ಕತ್ತರಿ, ಅಳತೆಪಟ್ಟಿ, ದಾರ, ಮೆಶಿನಿಂಗೆ ಬಿಡುವ ಎಣ್ಣೆ – ಎಲ್ಲಾ ತಂದು ಕೊಟ್ಟ. ಚಾವಡಿಯ ಮೂಲಗೆ ಮೆಶಿನು ಮಡುಗಿಸಿಯೂ ಕೊಟ್ಟ.

ಎಂಕಿ ಉದಿಯಪ್ಪಾಗಳೇ ಬೇಗ ಎದ್ದು ಮಿಂದಿಕ್ಕಿ ತಲೆ ಬಾಜಿ ಅಖ್ಬಗೆ ರಜಾ ಮನೆ ಕೆಲಸಕ್ಕೆ ಸೇರಿ ಒಂದರ್‍ಯಾಣ ಕೆಲಸ ಮುಗುಶಿಕ್ಕಿ, ಮೆಶಿನ್ನಿಲ್ಲಿ ಕೂಪಲೆ ಸುರು ಮಾಡಿತ್ತು. ಸುರು ಸುರುವಿಲ್ಲಿ ಹಳೆ ವಸ್ತ್ರ ತಂದು ಇದರಿಂದ ಲಂಗ ಮಾಡು ಹೇಳಿಯೂ ಮಗಳಂಗೆ ಚಡ್ಡಿ ಮಾಡು ಹೇಳಿಯೋ ಕೊಟ್ಟುಕೊಂಡು ಇತ್ತಿದ್ದವು. ಎಂಕಿಯ ಹೊಲಿಗೆ ಗಟ್ಟಿದ್ದು ಲ್ಯಾಕಲ್ಲಿ ಹೊಲಿತ್ತು. ಹೇಳಿ ಗೊಂತಾದ ಮತ್ತೆ ರವಕ್ಕೆ ಹೊಲಿವಲೆ ಕೊಡ್ಳೆ ಸುರು ಮಾಡಿದವು; ಮತ್ತೆ ಪುರುಸೊತ್ತು ಇಲ್ಲದಷ್ಟು ಹೊಲಿವಲೆ ವಸ್ತ್ರ ಬಪ್ಪಲೆ ಸುರುವಾತು. ಅಲ್ಲಿ ಹತ್ರ ಹೊಲಿವವು ಆರೂ ಇಲ್ಲದ್ದ ಕಾರಣ ಪ್ರತಿಯೊಂದಕ್ಕೂ ಕಣ್ಯಾರಕ್ಕೆ ಹೋಯೇಕಾಗಿ ಇತ್ತು. ಈಗ ಊರಿಲ್ಲಿಯೇ ಎಂಕಿ ಹೊಲದು ಕೊಡುವ ಕಾರಣ ಎಲ್ಲೋರಿಂಗೂ ಅನುಕೂಲ ಆತು. ಒಂದೊಂದಾರಿ ಪುರುಸೊತ್ತು ಇಪ್ಪಾಗ ಸಾವಿತ್ರಿಯೂ, ಶ್ಯಾಮನೂ, ಅದಕ್ಕೆ ಸಹಾಯ ಮಾಡುಗು ಹೊಲದ ರವಕ್ಕೆ ಅಂಗಿಗೋಕೆ ಗುಬ್ಬಿ ಹಾಕುದು – ಒಸ್ತ್ರಂಗೋಕ್ಕೆ ಇಸ್ತ್ರಿ ಹಾಕಿ ಮಡಚ್ಚಿ ಮಡುಗುದು – ಮಾಡ್ಳೆ ಸುರು ಮಾಡಿದವು. ಹಗಲಿಡೀ ಎಂಕಿಗೆ ಕೆಲಸಲ್ಲಿಯೇ ಹೊತ್ತು ಹೋಗೆಂಡು ಇತ್ತು. ಇರುಳಪ್ಪಾಗ ಬಚ್ಚಿ ಬೇಗ ಮನಿಕೊಂಡು ಇತ್ತು. ಆದರೂ...

ಇರುಳು ಒರಕ್ಕಿಲೊಂದಾರಿ ದಿಬ್ಬಾಣದ ಕನಸು ಕಂಡುಗೊಂಡು ಇತ್ತು. ದಿಬ್ಬಾಣಲ್ಲಿ ಮದಿಮ್ಮಾಯ ಹಿಲಾಲು ದೀವಿಟಿಗೆಗಳ ನಡುವೆ ಮಿಂಚಿಯೊಂಡು ಇದ್ದ ಕನಸು ದಿನವೂ ಕಟ್ಟಿಗೊಂಡು ಇತ್ತು. ಆ ಕನಸಿಲ್ಲೇ ಅದು ನೆಮ್ಮದಿಯ ಕಂಡು ಗೊಂಡಿತ್ತು.

ಎಂಕಿಗೀಗ ನಲ್ವತ್ತೈದು ದಾಂಟಿತ್ತು. ಹೆರಗಿದ್ದು ಕೂಪದು ನಿಂದತ್ತು. ತಲೆ ನೆರವಲೆ ಸುರುವಾಯಿದು. ಅದರ ಅಬ್ಬೆ, ಅಪ್ಪ ಒಬ್ಬರ ಹಿಂದೆ ಒಬ್ಬರಾಗಿ ಕಣ್ಣು ಮುಚ್ಚಿದವು.

ಅದರ ತಮ್ಮ ಶ್ಯಾಮ ಕಲ್ತು ಬಂದು ಕಣ್ಯಾರ ಶಾಲೆಲಿ ಮಾಷ್ಟ್ರ ಆದ. ಅವಂಗೆ ಮದುವೆ ಆಗಿ ಒಂದು ಕೂಸು ಹುಟ್ಟಿ ಎರಡು ವರ್ಷ ಆತು. ಎಂಕಿಗ ಎಲ್ಲೋರು ಪ್ರೀತಿ ಗೌರವಂದ ನೋಡ್ಯೊಂಡವು. ಶ್ಯಾಮ ಅಕ್ಕನ ಮಾತಿನ ಮೀರದೆ ನೆಡಕ್ಕೊಂಡ. ಅವನ ಹೆಂಡತಿ ವಾಗ್ದೇವಿ, ಅವು ಎನ್ನ ಅತ್ತಿಗೆ ಅಲ್ಲ ಹೆತ್ತಬ್ಬೆ ಹೇಳಿಯೇ ಜಾನ್ಸುತ್ತೆ ಆನು. ಅಷ್ಟು ಪ್ರೀತಿಲಿ ಎನ್ನ ನೋಡಿದ್ದವು. ಹೇಳಿ ಎಲ್ಲೋರ ಹತ್ರೂ ಹೇಳ್ಯೊಂಡು ಬಂತು. ಅವರ ಮಗಳು ಶಾಂತ ಅದರ ಕಂಕುಳಿಂದ, ತೊಡೇಂದ ಕೆಳಗಿಳಿಯ ಗೋಂದಿನ ಹಾಂಗೆ ಎಂಕಿಗೆ ಅಂಟುಗು.

ಅತ್ಲಾಗಿ ದಾಸೆತ್ತಿ ಸುಮ್ಮನೆ ಕೂಯಿದಿಲ್ಲೆ. ಎಡಿಗಾದಷ್ಟು ರಾಮಚಂದ್ರನ ಹಿಂಡಿಕ್ಕಿಯೇ ಊರು ಬಿಟ್ಟಿತ್ತು. ಅದರ ಸಹವಾಸಂದ ಅವ ಕುಡಿವಲೆ, ಜೂಜಾಡ್ಳೆ ಕಲ್ತ. ತೋಟ ಗದ್ದೆಯ ಕಡೆಗೆ ತಲೆ ಹಾಕಿಯೂ ಮನುಗಿದ್ದಾ ಇಲ್ಲೆ. ಆಸ್ತಿ ಅರೂಪ ಆಗಿ ಸಿಕ್ಕಿದಷ್ಟು ಕ್ಯೊದು ತಿಂಬಲೆ ಕಲ್ತ. ದಾಸೆತ್ತಿಗೆ ಬಂಗಾರದ ಒಡವೆಗಳ ಕೇಳಿದಷ್ಟು ಮಾಡ್ಸಿ ಹಾಕಿದ. ಬೇಂಕಿನ ಖಾತೆಗೆ ಅದರ ಹೆಸರನ್ನೂ ಸೇರ್ಸೆಂಡು, ಪೈಸೆ ಜಮಾ ಮಾಡಿಕ್ಕೊಂಡು ಇತ್ತಿದ್ದ. ಇತ್ತೀಚೆಗೆ ಅವ ಕುಡಿವದು, ತಿಂಬದು ಹೆಚ್ಚಾಗಿ ದಿನಾ ಅದರೊಟ್ಟಿಂಗೆ ಲಡಾಯಿ ಪೆಟ್ಟುಗುಟ್ಟು ಮಾಡ್ಲೆ ಸುರುಮಾಡಿದ. ಹೊಟ್ಟೆಗೆ ಸರಿಯಾಗಿ ಕೂಳು ಇಲ್ಲದ್ದೆ, ಕುಡಿವ ಚಟ ವಿಪರೀತ ಆಗಿ, ಕೆಪ್ಪಟೆ ಮೋರೆ ಹಮ್ಮು ಕಟ್ಟೆ ಸುರುವಾತು. ಹೊಟ್ಟೆ ಒಳನೀರು ತುಂಬಿ, ಮಿರಿ ಮಿರಿ ಮಿಂಚಲೆ ಸುರುವಾತು. ಇದರೆಲ್ಲಾ ನೋಡಿತ್ತು ದಾಸೆತ್ತಿ ದುರ್ಗೆ.

"ಎನಗೆ ನಿನ್ನೊಟ್ಟಿಂಗೆ ಏಗಲೆಡಿಯ. ಆನು ಎನ್ನ ಮನಗೆ ಹೋವುತ್ತೆ. ಈ ಹಾಳು ಕೊಂಪೆಲಿ ನರಳಿ ಎನಗೆಂತ ಆಯೇಕು" ಹೇಳ್ಳೆ ಸುರು ಮಾಡಿತ್ತು.

"ಎನ್ನ ಬಿಟ್ಟಿಕ್ಕಿ ಹೋಗೇಡ. ನಿನಗೆ ಬೇಕಾಗಿ ಎನ್ನ ಕೈ ಹಿಡಿದ ಹೆಂಡತಿಯ ಬಿಟ್ಟೆ. ಅಬ್ಬೆಯ ಕಣ್ಣೀರಿಲ್ಲಿ ಕೈ ಅದ್ದುಸಿದೆ ಎನ್ನ ಬದುಕ್ಕೆಲ್ಲಾ ನೀರು ಪಾಲಾತು' ಹೇಳಿ ಅಂಗಲಾಚಿದ.

“ಅವರೆಲ್ಲಾ ಬಿಡು ಹೇಳಿ ಆನು ಹೇಳಿದ್ದನೋ? ಆನೆಂತ ನಿನ್ನ ಕೈ ಹಿಡುದ ಹೆಂಡತಿಯೋ, ನೀನೇ ಇಲ್ಲಿಗೆ ಬಲಿಗೇಂಡು ಬಂದೆ. ಎನಗಿಲ್ಲಿ ಸರಿ ಆವುತ್ತಿಲ್ಲೆ; ಆನು ಮದಲೆ ಇದ್ದಲ್ಲಿಂಗೇ ಹೋವುತ್ತೆ” ಹೇಳಿ ಬಾಗಿಲು ದಾಂಟಿ ಹೆರ ಹೋತು. ಮತ್ತೆ ವಾಪಾಸು ಬಯಿಂದಿಲ್ಲೆ. ಹೋಪಾಗ ಹೊರಗಟ್ಲೆ ಚಿನ್ನ, ಬೇಂಕಿಲ್ಲಿದ್ದ ಪೈಸೆಯ ಪೂಜಿಕಟ್ಟಿಗೊಂಡೆ ಹೋತು.

ಈಗ ರಾಮಚಂದ್ರಂಗೆ ಎಂಕಿಯ ನೆಂಪಾತು. ಹೆಂಗಾರು ಮಾಡಿ ಅದರ ವಾಪಾಸು ಕರಕ್ಕೊಂಡು ಬಂದು ಸಂಸಾರ ಮಾಡೇಕು ಹೇಳಿ ಸೀದಾ ಎಡನ್ನಾಡಿಂಗೆ ಹೋದ. ಮನೆ ಹುಡುಕ್ಕಿ ಎಂಕಿ ಇದ್ದಲ್ಲಿಗೆ ಬಂದ.

“ಎಂಕಿ ಆನಾರು ಹೇಳಿ ಗುರ್ತ ಸಿಕ್ಕತೋ? ಆನು ನಿನ್ನ ಗೆಂಡ ರಾಮಚಂದ್ರ. ಬಾ ಎನ್ನೊಟ್ಟಿಂಗೆ, ಈಗ ಮನೇಲಿ ಆರೂ ಇಲ್ಲೆ. ಆನೂ ನೀನು ಸೇರಿ ಹೊಸ ಸಂಸಾರ ಮಾಡುವೊ” ಹೇಳಿದ.

ಎಂಕಿಯ ಒಂದಾರಿ ಅವನ ದಿಟ್ಟಿಸಿ ನೋಡಿತ್ತು; ಕುಡುದು ಕುಡುದು ಹಡಿಕಟ್ಟಿದ ಅವನ ಮೋರೆ; ಗುಳಿ ಬಿದ್ದ ಕಣ್ಣುಗೊ, ಸುಟ್ಟ ಬದನೆಕಾಯಿ ಹಾಂಗೆ ಕಪ್ಪುಡರಿದ ಶರೀರ ಕಂಡು ಎಂಕಿಗೆ ಹೇಸಿಗೆ ಆತು.

“ನೀನೆನ್ನ ಗೆಂಡನೂ ಅಲ್ಲ. ಆನು ನಿನ್ನ ಹೆಂಡತಿಯೂ ಆವುತ್ತಿಲ್ಲೆ. ಎನ್ನ ಸಂಸಾರ ಸುಖ ಎಂದೋ ಮುಗುದು ಹೋಯಿದು; ನಿಂಗೊ ಬಂದ ದಾರಿಗೆ ಹೋಪಲಕ್ಕು. ಆನಿನ್ನು ಅಲ್ಲಿ ಬತ್ತಿಲ್ಲೆ.” ಹೇಳಿ ಖಡಾಖಂಡಿತ ಹೇಳಿತ್ತು.

ಇದರ ಸಂವಾದ ಕೇಳ್ಳಿ ಶ್ಯಾಮನೂ, ಅವನ ಹೆಂಡತಿ ವಾಗ್ದೇವಿಯೂ ಅಲ್ಲಿಗೆ ಬಂದವು.

“ಭಾವ ನೀನಾದರೂ ಅಕ್ಕಂಗೆ ಬುದ್ಧಿ ಹೇಳು” ಹೇಳಿದ.

“ಎನಗೆ ಭಾವ ಹೇಳಿ ಆರೂ ಇಲ್ಲೆ. ಇಪ್ಪದು ಅಕ್ಕ ಮಾಂತ್ರ. ಅದರ ಕಳಕ್ಕೊಂಬಲೆ ಆನು ತಯಾರಿಲ್ಲೆ” ಹೇಳಿದ.

“ನಿನಗೆ ಈಗ ಅತ್ತಿಗೋರ ನೆಂಪಾದ್ದೊ? ಅವು ಇನ್ನು ಬಪ್ಪ ಆಶೆ ಮಡಿಕ್ಕೊಳೇಡ. ಅವರ ಅಬ್ಬೆ ಹಾಂಗೆ ಆನು ನೋಡ್ಯೊಂಬೆ. ನಿಂಗೊಗೆ ಅವರ ನೋಡ್ಯೊಂಬ ಋಣ ಇಲ್ಲ. ಆ ಭಾಗ್ಯ ಎಂಗೊಗೆ ದಕ್ಕಿದ್ದು. ಅವು ಇಲ್ಲಿಯೇ ಇರುತ್ತವು”

"ಅಷ್ಟಪ್ಪಾಗ ಅಲ್ಲೇ ಹೆರ ಆಡ್ಯೊಂಡು ಇದ್ದ ಮಾಣಿ ಶಂಕರ ಎಂಕಿಯ ಎರಡೂ ಕಾಲಿನ ಬಿಗಿದಪ್ಪಿಗೊಂಡ.

ಬಂದ ದಾರಿಗೆ ಸುಂಕ ಇಲ್ಲೆ ಹೇಳಿ – ರಾಮಚಂದ್ರ ಅಲ್ಲಿಂದ ಹೆರಟ. ಎಲ್ಲಿಗೆ ಹೋದನೋ ಎಂತಾದನೋ ಹೇಳುವ ಸಮಾಚಾರ ಗೊಂತಾಯಿದಿಲ್ಲೆ.

ಎಂಕಿಗೆ ಮಾಂತ್ರ ಈಗಳೂ ದಿಬ್ಬಾಣ ಬಂದ ಕನಸು ಹಿಲಾಲು ದೀವಟಿಗೆಯ ಬೆಣಚ್ಚಿಲ್ಲಿ ಮದಿಮ್ಮಾಯನ ಮೋರೆ ಕಂಡುಗೊಂಡು ಇತ್ತು.

ಹಾಂಗೇ ದಿನ ಹೋಗ್ಯೊಂಡು ಇತ್ತು. ಅದಕ್ಕೆ ಅರ್ವತ್ತೈದು ದಾಂಟಿತ್ತು. ಕಣ್ಣು ಮಂಜಪ್ಪಲೆ ಸುರುವಾತು. ತಮ್ಮ ಶ್ಯಾಮ ಅದರ ಕರಕ್ಕೊಂಡು ಕಣ್ಣಿನ ಡಾಕ್ಟ್ರ ಹತ್ರಂಗೆ ಹೋದ. ದೃಷ್ಟಿದೋಶ ಇದ್ದು ಹೇಳಿ ಗೊಂತಾತು. ಕನ್ನಡಕವ ಮೂಗಿಂಗೆ ಏರ್ಸಿತ್ತು. ಅದು ಸಂಪಾದಿಸಿದ ಒಂದು ಪೈಸೆಯನ್ನೂ ಶ್ಯಾಮ ಮುಟ್ಟಿದ್ದಾಂ ಇಲ್ಲೆ.

ಬೇಂಕಿಲ್ಲಿ ಅದರ ಖಾತೆ ತೆಗಶಿ, ಜಮಾ ಮಾಡಿಗೊಂಡು ಇತ್ತಿದ್ದ

ಎಂಕಿ ಎಪ್ಪತ್ತಕ್ಕೆ ಹತ್ರ ಬಂತು. ಕಾಲು ಬೇನೆ, ಮೊಳಪ್ಪು ಬೇನೆ ಸೊಂಟ ಬೇನೆ ಸುರುವಾತು.

"ಅಕ್ಕಾ, ಇನ್ನೂ ಎಂತಕೆ ಹೊಲುದು ಅಸ ಬಡಿತ್ತಕ್ಕ. ಸುಮ್ಮನೆ ಉಂಡೊಂಡು ಸುಖಲ್ಲಿ ಇರು. ಸಾಕಿನ್ನು ಹೊಲಿಗೆ ಕೆಲಸ" ಹೇಳಿದ.

"ಸುಮ್ಮನೆ ಕೂದು ಎಂತ ಮಾಡ್ಳಿ ಶ್ಯಾಮಾ? ಹೊತ್ತು ಹೋಯೇಕನ್ನೆ" ಹೇಳಿತ್ತು.

"ಕಥೆ ಪುಸ್ತಕಂಗಳ ತಂದು ಕೊಡುತ್ತೆ. ಬೇಕಾದರೂ ಪುರಾಣ ಪುಸ್ತಕಂಗಳನ್ನೂ ತತ್ತೆ" ಹೇಳಿದ.

"ಹಾಂಗೆಲ್ಲಾ ಹೇಳಿದರೆ ಅವು ಕೇಳವು. ಮೆಶಿನ್ ಕಳಚ್ಚಿ ಅಟ್ಟಕ್ಕೆ ಮಡುಗಿದರೆ ಮಾಂತ್ರ ಸುಮ್ಮನಿಕ್ಕು" ಹೇಳಿತ್ತು ವಾಗ್ದೇವಿ.

"ಅದಪ್ಪು ವಾಗ್ದೇವಿ, ಅಕ್ಕನ ಕೆಲಸ ಬಿಡುಸೇಕಾರೆ ಅದೊಂದೇ ದಾರಿ" ಹೇಳಿ ಮಿಶನು ಕಳಚ್ಚಿ ಮಡುಗಿದ. ಅಕ್ಕಂಗ ನೆಲದ ಮೇಗೆ ಮನುಗಲೆ ಕಷ್ಟ ಆವುತ್ತು ಹೇಳಿ, ಒಳ್ಳೆ ಮರದ ಮಂಚ ತಂದು ಹಾಕ್ಸಿದ. ಮಾಣಿ ಶಂಕರ ಬಿ.ಎ. ಕ್ಲಾಸಿಂಗೂ ಎತ್ತಿದ. ಅವ ಹಾಸ್ಟೆಲಲ್ಲಿ ಇದ್ದಂಡು ಮಂಗಳೂರಿಲ್ಲಿ ಕಲ್ತುಗೊಂಡಿತ್ತಿದ.

ರಜೆಲಿ ಬಂದಿಪ್ಪಾಗೆಲ್ಲಾ ಅತ್ತೆಯ ಮೂಟ್ಟೇಲಿ ಮುನಿಕ್ಕೊಂಡಿತ್ತಿದ್ದ. ಒಂದು ದಿನ ಎಂಕಿ ಹೇಳಿತ್ತು.

"ಶ್ಯಾಮಾ, ಬೇಂಕಿಲ್ಲಿ ಎನ್ನ ಹೆಸರಿಲ್ಲಿಪ್ಪ ಪೈಸೆಯ ಖಾತೆ ಮುಚ್ಚಸಿ ತೆಕ್ಕೊಂಡು ಬಾ"

"ಈಗ ಎಂತಕೆ ಅಕ್ಕಾ" ಕೇಳಿ

"ನೀನು ಹೇಳಿದಷ್ಟು ಮಾಡು" ಹೇಳಿತ್ತು.

ಶ್ಯಾಮ ಮರುದಿನವೇ ಖಾತೆ ಮುಚ್ಚುಸಿ ಪೈಸೆ ತಂದು ಕೊಟ್ಟ ಅದರಲ್ಲಿ 20,000 ರೂ. ಜಮಾ ಆಗಿತ್ತು. ಎಂಕಿ ಒಂದಾರಿ ಪೈಸೆ ಲೆಕ್ಕ ಮಾಡಿ ಮೂರು ಪಾಲು ಮಾಡಿತ್ತು.

"ಶ್ಯಾಮಾ, ಈ ಹತ್ತು ಸಾವಿರವ ಶಂಕರನ ಹೆಸರಲ್ಲಿ ಹಾಕು. ಅವ ಮುಂದಕ್ಕೆ ಇನ್ನೂ ಕಲಿಯಲಿ" ಹೇಳಿತ್ತು.

ಈ ಐದು ಸಾವಿರವ ವಾಗ್ದೇವಿಗೆ ಚಿನ್ನ ಮಾಡ್ಸಿ ಹಾಕು. ಎನಗೆ ಮಗಳು ಇಲ್ಲೆ ಹೇಳುವ ಭಾವನೆಯ ಅದು ಅಳುಶಿದ್ದು ಹೇಳಿತ್ತು. ಈ ಐದು ಸಾವಿರವ ನೀನು ಮಡಿಕ್ಕೊ. ನಿನಗೆ ಎಂತಕಾದರೂ ಕರ್ಚಿಗಾತು" ಹೇಳಿ ಕೊಟ್ಟತ್ತು.

"ಎಂತಗಕ್ಕ ಈಗಳೇ ಈ ವ್ಯವಸ್ಥೆ" ಶ್ಯಾಮ ಕಣ್ಣಲ್ಲಿ ನೀರು ತುಂಬಿಸಿಕೊಂಡ. ವಾಗ್ದೇವಿಯೂ ಕಣ್ಣು ಒರೆಸಿಕೊಂಡತ್ತು.

"ಎನ್ನ ಜೀವ ಇಪ್ಪಗಲೇ ಎಲ್ಲಾ ವ್ಯವಸ್ಥೆ ಆಯೇಕು" ಅದಕ್ಕೆ ಹೇಳಿತ್ತು.

ಎಂಕಿ ಮತ್ತೆ ಹೆಚ್ಚು ದಿನ ಬದುಕ್ಕಿದ್ದಿಲ್ಲೆ. ನಾಲ್ಕೈದು ತಿಂಗಳಪ್ಪಾಗ ಒಂದಾರಿ ಜ್ವರಲ್ಲಿ ಮನಗಿತ್ತು. ಮೂರು ದಿನ ಬಿಡದ್ದೇ ಜ್ವರ ಬಂತು. ಡಾಕ್ಟ್ರಕ್ಕಳ ಮದ್ದು, ಇಂಜೆಕ್ಷನ್ ಯಾವುದೂ ಹಿಡುದ್ದಿಲ್ಲೆ. ಜ್ವರ ನೆತ್ತಿಗೆ ಏರಿತ್ತು.

ಒಂದಾರಿ "ಶ್ಯಾಮಾ ಬೇಗಾ ಬಾ" ಹೇಳಿ ಕಿರುಚಿತ್ತು. ಶ್ಯಾಮ ಓಡಿಬಂದ.

"ಎನ್ನ ದಿಬ್ಬಾಣ ಬಂತು...... ಹಿಲಾಲು... ದೀವಟಿಗೆ... ಮದಿಮ್ಮಾಯ..." ಹೇಳ್ಳುಪ್ಪಾಗ ಮೇಲುಸಿರು ಬಪ್ಪಲೆ ಸುರು ಆತು.

"ವಾಗ್ದೇವಿ, ಬಾ ಅಕ್ಕನ ಹಿಡಿಕ್ಕೊ. ಮಂಚಂದ ಕೆಳ ದರ್ಬೆ ಕುಚ್ಚಿಲ್ಲಿ ಮನುಗುಸುವೊ" ಹೇಳಿದ. ಇಬ್ರೂ ಕೂಡಿ ಕೆಳ ಮನುಶಿದವು. ಉಸುರು ಮೇಲೆ ಮೇಲೆ ಬಂತು. ಶ್ಯಾಮ ತುಳಶಿ ನೀರು ಸಕ್ಕಣಲ್ಲಿ ಕುಡುಶಿದ. ವಾಗ್ದೇವಿಯೂ ಬಾಯಿಗೆ ನೀರು ಬಿಟ್ಟಿತ್ತು. ಮಾಣಿ ಶಂಕರನೂ ಬಾಯಿಗೆ ನೀರು ಹಾಕಿದೆ – ಉಸುರು ನಿಧಾನಕ್ಕೆ ನಿಂದತ್ತು.



# ಮಾಜಣಿ ಮಾಷ್ಟ್ರನೂ, ಹೊನ್ನಕ್ಕತ್ತೆಯೂ

"ಏ ಮಾಜಣಿ, ಇನ್ನೂ ಹಸೇಲಿ ಬಿದ್ದೊಂಡು ಇದ್ದಿಯೋ? ಏಳು ನಿನಗೆ ಪೂಜೆ ಮಾಡಿಕ್ಕಿ ಹೂಪಲೇ ಆನು ಬಂದುದು. ಎದ್ದು ಹೆರ ಬಾ" ಹೇಳಿ ಸುಂಟರ ಗಾಳಿಯ ಹಾಂಗೆ ಹೊನ್ನಕ್ಕತ್ತೆ ಮಹಾಲಿಂಗ ಮಾಷ್ಟ್ರ ಮನೆಗೆ ಬಂದು ಜೆಗಲಿ ಮೇಗೆ ಒಕ್ಕರಿಸಿತ್ತು. ಅದರ ಕೈಲೊಂದು ಸಗಣ ಹೆರುಕ್ಕುವ ಕುರುವೆಯೂ, ಕಡ್ಪ ಕತ್ತಿಯೂ ಇತ್ತು.

ಹೊನ್ನಮ್ಮ ಹೇಳಿ ಅದರ ಹೆಸರು. ಎಲ್ಲೋರೂ ಅದರ ಹೊನ್ನು ಹೊನ್ನು ಹೇಳಿ ದಿನಿಗೇಳಿಗೊಂಡಿತ್ತಿದ್ದವು. ಅದು ಬಾಲ ವಿಧವೆ. ಎಂಗೊ ಎತ್ತಾ ನೋಡೆಕಾರೆ ಮದಲೆ ಅದರ ತಲೆ ಬೋಳ್ಸಿ, ಕಾಜು ಒಡಶಿ, ಬೆಳಿ ಸೀರೆಯ ಸುತ್ತುಸಿದ್ದವು. ದೂರಲ್ಲಿ ಅದು ಎಂಗೊಗೆ 'ಅತ್ತೆ ಆಯೇಕಾದ ಕಾರಣ, ಎಂಗೊ ಅದರ ಹೊನ್ನ ಕತ್ತೆ ಹೇಳಿ ದಿನಿಗೇಳಿಗೊಂಡು ಇತ್ತಿದ್ದೆಯೊ. ಅದರ ಕಂಡರೆ ಮಕ್ಕೊ ಎಲ್ಲಾ ಹೆದರಿ ಓಡ್ಯೊಂಡು ಇತ್ತಿದ್ದವು. ಅದಕ್ಕೆ ಗಂಡುಬೀರಿ ಹೇಳಿಯೇ ಹೆಸರು. ಬೋಳು ತಲೆಯ ಹಾಂಗೇ ಬಿಟ್ಟಂಡು, ಬೆಳಿ ಸೀರೆಯ ಸೆರಗಿನ ಸೊಂಟಕ್ಕೆ ಬಿಕ್ಕೊಂಟು, ದಾರಿಲಿ ಸಿಕ್ಕಿದವರ, ಹೋದವರ ಬಂದವರ ಎಲ್ಲಾ ಬಾಯಿಗೆ ಬಂದ ಹಾಂಗೆ ಬೈಗು.

" ಏ ಮುಲಾಜಿಲ್ಲದ ಬೋಳಿ ಮಗ'– 'ಹಾದರಕ್ಕೆ ಹುಟ್ಟಿದವನೆ' 'ಮಿಂಡನ ಕಟ್ಯೊಂಡ ಊರಸೂಳೆ' – ಹೀಂಗೆ ಆದರ ಬಾಯಿಲಿ ಬಾರದ್ದ ಶಬ್ದಂಗೊ ಇಲ್ಲೆ. ಹಾಂಗಾಗಿ ಅದರ ನೆರಳು ಅಂಜಿದರೆ ಮಕ್ಕೊ ಎಲ್ಲಾ ಒಳಂಗೆ ಓಡುಗು; ಹೆಮ್ಮಕ್ಕೊ ಬಾಗಿಲು ಹಾಕಿ ಕೂರುಗು. ಹಾಂಗಿದ್ದ ನರಪಿಶಾಚಿ ಆಯಿದು ಅದು ಇಡೀ ಊರಿಂಗೆ.

ಗೆಂಡ ಸತ್ತ ಮೇಲೆ ಅಪ್ಪನ ಮನೆಗೆ ಬಂದು ಬಿದ್ದ ಹೊನ್ನಕ್ಕತ್ತೆ, ಮನೇಲಿಯೂ ಅಷ್ಟೇ ದರ್ಪ, ಸೊಕ್ಕು ಹಾಂಕಾರಲ್ಲಿ ಇತ್ತು. ಅದು ಎಲ್ಲೋರನ್ನೂ ಹೆದರುಸುಗೇ ವಿನಹ ಆರಿಂಗೂ ಹೆದರ. ಅದರ ತಮ್ಮ ಎಂಕಟನ, ಅವನ ಹೆಂಡತಿ ಸಾತುವ ತಾನು ಹಾಕಿದ ಗೆರೆ ದಾಂಟದ್ದ ಹಾಂಗೆ ನೋಡ್ಯೊಂಡಿತ್ತು.

ಅದರ ಅಡ್ಕಲ್ಲಿ ಹಾದುಗೊಂಡು ಒಂದು ದಾರಿ ಇದ್ದತ್ತು. ಆ ದಾರಿಯಾಗಿಯೇ ಊರ ಎಮ್ಮೆ ದನಗೂ ಮೇವಲೆ ಇನ್ನೊಂದು ಅಡ್ಕಕ್ಕೆ ಹೋಯೇಕು. ಎಮ್ಮೆ ದನಂಗೊ ಹೋಪಾಗ ದಾರಿ ಮೇಗೆ ಸಗಣ ಹಾಕುಗು. ಆ ಸಗಣವ ಬಾಚಲೆ ಆರಿಂಗೂ ಬಿಡ. ಅದು ತನ್ನ ಜಾಗೇಲಿ ಬಿದ್ದ ಕಾರಣ ಅದೆಲ್ಲಾ ತನ್ನದೇ ಹೇಳಿ ಅದರ ವಾದ.

ಮಾಲಿಂಗ ಮಾಷ್ಟ್ರಿಂಗೆ ಶನಿವಾರವೂ ಆದಿತ್ಯವಾರವೂ ರಜೆ ಇದ್ದ ಕಾರಣ ತನ್ನ ತುಂಡು ಜಮೀನಿಂಗೆ ಗೊಬ್ಬರ ಬೇಕು ಹೇಳಿ ಹೊನ್ನಕ್ಕತ್ತೆಯ ಅಡ್ಕಕ್ಕೆ ಹೋಗಿ ಸಗಣ ಹೆರುಕ್ಕಲೆ ಸುರು ಮಾಡಿದ. ಮದಲಾಣ ಸರ್ತಿ ಹೊನ್ನಕ್ಕತ್ತೆಗೆ ಗೊಂತಾಯಿದಿಲ್ಲೆ. ಎಂತಕೋ ದನಂಗೊಕ್ಕೆ ಸರಿಯಾಗಿ ಮೇವು ಹಾಕಿದ್ದವಿಲ್ಲೆ ಹೇಳಿ ಕಾಣುತ್ತು. ಎರಡು ಮುದ್ದೆ ಸಗಣವೂ ಸಿಕ್ಕಿದ್ದಿಲ್ಲೆ ಹೇಳಿ ಜಾನ್ಸಿತ್ತು. ಮತ್ತಾಣ ವಾರವೂ ಹಾಂಗೆ ಆದ್ದರ ನೋಡಿ ಅದಕ್ಕೆ ಅನುಮಾನ ಬಂತು. ಮೂರನೇ ವಾರ ಕಾದು ಕೂದು ನೋಡುವಾಗ ಮಾಜಣಿ ಮಾಷ್ಟ್ರ ಕುರುವೆ ತುಂಬ ಸಗಣ ತುಂಬುಸಿ ತೆಕ್ಕೊಂಡು ಹೋಪದರ ನೋಡಿತ್ತು. ಇದರ ಕಂಡು ಹೊನ್ನಕ್ಕತ್ತೆ ಕೋಪಲ್ಲಿ ಧರುಸಿತ್ತು. 'ಈ ಮಾಜಣಿಗೆ ಬುದ್ಧಿ ಕಲ್ಸದ್ದರೆ ಆನು ಹುಟ್ಟಿದ್ದು ಎಂತಕೆ? ಅವನ ಸೊಕ್ಕು ಇಳುಶಿಯೇ ಆನಿಂದು ಮನಗೆ ಹೋಪದು' ಹೇಳಿ ಶಪಥ ಹಾಕಿತ್ತು. ದುರುದುಂಡಿಯ ಹಾಂಗೆ ದರುಸೇಂಡು ಹೊನ್ನಕ್ಕತ್ತೆ ಮಾಜಣಿ ಮಾಸ್ತ್ರ ಮನೆಗೆ ಎತ್ತಿತ್ತು.

ಮಾಷ್ಟ್ರಿಂಗೆ ಅದು ಆರದೆನಿ ಹೇಳಿ ಗೊಂತಾದರೂ ಹಸೆಲಿ ಮನುಗೇಂಡೇ ಕೇಳಿದ:

"ಆರದು ಹೆರ ಕೆನವದು? ಹೊನ್ನಕತ್ತೆಯೋ"

"ಎಂತ ಮಾಜಣಿ, ನಿನಗೆ ಆನು ಕತ್ತೆ ಹಾಂಗೆ ಕಾಣುತ್ತೊ? ಆ ನಂದಿನಿ ಗೇಳಿದ್ದು ಕೆನದ ಹಾಂಗೆ ಆತೊ? ಎಷ್ಟು ಸೊಕ್ಕು ನಿನಗೆ?

"ಆನು ಮಾಂತ್ರ ಅಲ್ಲ ಇಡೀ ಊರವು ನಿನ್ನ 'ಕತ್ತೆ' ಹೇಳಿ ದಿನಿಗೇಳ್ತವೋ ಇಲ್ಲೆಯೋ" ಮಾಷ್ಟ್ರು ಹೆರ ಬಂದು ಹೇಳಿದ.

"ಆರೆನ್ನ ಕತ್ತೆ ಹೇಳಿ ಹೇಳುತ್ತವು? ತೋರ್ಸು ನೋಡುವೊ"

"ನಿನ್ನ ಎಲ್ಲೋರು ದಿನಿಗೇಳುದು ಹೇಂಗೆ? 'ಹೊನ್ನಕತ್ತೆ ಹೇಳಿ ಅಲ್ಲದೊ? "ಕತ್ತೆಗಳಲ್ಲಿ 'ಹೊನ್ನಕತ್ತೆ' ಹೇಳಿ ಜಾತಿ ಇಲ್ಲೆ. ಹೇಸರಕತ್ತೆ ಹೇಳಿ ಮಾಂತ್ರ ಇಪ್ಪದು. ಹಾಂಗಾಗಿ ಆನು ನಿನ್ನ ಕತ್ತೆ ಹೇಳಿದ್ದು. ಉದಿಯಪ್ಪಾಗಳೇ ಬಂದು ಕತ್ತೆ ಕೆನದ ಹಾಂಗೆ ಕೆನೆದನ್ನೆ? ಎನ್ನ ಒಂದಿಷ್ಟು ಒರಗಲೂ ಬಿಟ್ಟಿದಿಲ್ಲೆ"

"ಇದಾ ಮಾಜಣಿ, ಎನ್ನ ಕೋಪ ಬರುಸೇಡ. ಪಿಸುರಿಲ್ಲಿ ಆನೆಂತ ಮಾಡುವೆ ಹೇಳಿ ಎನಗೇ ಗೊಂತಾಗ. ಈ ಊರಿಲ್ಲಿ ಎನ್ನ ಕೆಣಕ್ಕಲೆ ಇಷ್ಟ್ರವರೆಗೆ ಆರೂ ಬಯಿಂದವಿಲ್ಲೆ. ಅವಕ್ಕೆ ಬುದ್ಧಿ ಕಲುಶುವ ತ್ರಾಣ ತ್ರಾಣ ಎನ್ನಲ್ಲಿದ್ದು. ಗೊಂತಾತೊ? ಆನು ನಿನ್ನ ಮಾಷ್ಟ್ರ ಗೀಷ್ಟ್ರ ಹೇಳಿ ನೋಡೆ ಮಿನಿಯಾ" ಕಣ್ಣು ಕೆಂಪಗೆ ಮಾಡಿ ಹೇಳಿತ್ತು ಹೊನ್ನಕ್ಕತ್ತೆ.

"ಎಂತ ಮಾಡುವೆ ನೀನು ಅದಾದರೂ ಹೇಳಿಕ್ಕು?"

"ಇದಾ, ಎನ್ನ ಕೈಲಿಪ್ಪದು ಕಡ್ಪಕತ್ತಿಗೊಂತಿದ್ದೊ" ಕತ್ತಿ ಮುಂದೆ ಹಿಡುದತ್ತು ಹೊನ್ನಕ್ಕತ್ತೆ.

"ಹೋ, ಹಾಂಗಾರೆ ನೀನು ಕತ್ತಿಲಿ ಕಡಿವಲೂ ತಯಾರೋ?

ಒಂದಾರಿ ಕತ್ತಿ ಎತ್ತಿನೋಡು. ಆನು ನಿನ್ನ ದರದರ ಏಳಕ್ಕೊಂಡು ಪೊಲೀಸು ಸ್ಟೇಷನಿಂಗೆ ಹಾಕಿಕ್ಕಿ ಬಪ್ಪೆ. ಎನ್ನ ಕಡಿ ನೋಡುವೊ. ಮಾಷ್ಟ್ರೊ ಒಂದು ಹೆಜ್ಜೆ ಮುಂದೆ ಸರುದಾ.

ಈ ಮಾಷ್ಟ್ರು ತನ್ನಂದ ಒಂದು ತೂಕ ಹೆಚ್ಚು ಹೇಳಿ ಕಂಡತ್ತು ಹೊನ್ನಕ್ಕತ್ತೆಗೆ.

"ನಿನಗೆ ತಿಮ್ಮುರುಟು ಹೆಚ್ಚಾಯಿದು ಮಾಜಣಿ. ತಾನು ಮಾಷ್ಟ್ರ-ದೊಡ್ಡ ಬುದ್ಧಿವಂತ ಹೇಳಿ ತಲಗೆ ಅಡರಿದ್ದು ನಿನಗೆ ಅದಕ್ಕೆ ನೀನು ಹೀಂಗೆಲ್ಲಾ ಪೆದಂಬು ಮಾತಾಡದು"

"ಅಪ್ಪು, ಅಲ್ಲ ಹೇಳಿ ಆರು ಹೇಳಿದ್ದವು? ಆನು ಬುದ್ಧಿವಂತನೂ, ಮರ್ಯಾದಸ್ಥನೂ ಅಪ್ಪು. ನಿನ್ನ ಹಾಂಗೆ ಬೇಡಂಗಟ್ಟೆ ಬೊಗಳೆಂಡು ಹೋವುತ್ತಿಲ್ಲೆ".

"ನಿನ್ನ ವಾದಂಗಳ ಕೇಳ್ಳೆ ಆನಿಲ್ಲಿಗೆ ಬಯಿಂದಿಲ್ಲೆ. ನಿನ್ನ ಮಾಷ್ಟ್ರತ್ತಿಗೆ ಇದ್ದರೆ ಶಾಲಗೆ ಆತು. ಒಳ್ಳೆ ಮಾತಿಲ್ಲಿ ಎನ್ನ ಅಡ್ಕಂದ ಹೆರುಕ್ಕಿದ ಸಗಣವ ಎನಗೆ ಕೊಡು. ನಿನ್ನ ಸಗಣವ ಎಲ್ಲಿ ಹಾಕಿದ್ದೆ ಹೇಳು ಆನದರ ಕೋರ್‍ಯೊಂಡು ಹೋವುತ್ತೆ."

"ಅದೋ? ಅದು ತೆಂಗಿನ ಸೆಸಿಯ ಬುಡದಲ್ಲಿ ಇದ್ದು. ಬೇಕಾದರೆ ಕೋಂತೊರ್ಂಡು ಹೋಗು."

"ಆನು ಈಗಳೇ ಅದರ ಕುರುವಗೆ ಹಾಕೊಂಡು ಹೋವುತ್ತೆ." ಹೇಳಿ ಹೊನ್ನಕ್ಕತ್ತೆ ಸಗಣವ ರಾಶಿ ಕಡೆಂಗೆ ಹೋತು.

"ನೀನು ಕೇಳಿದ್ದು ಎನ್ನ ಸಗಣವ ಅಲ್ಲದೊ? ಅದು ತೆಂಗಿನ ಹಿತ್ತಿಲ್ಲಿ ಸೆಸಿ ಬುಡಲ್ಲಿ ಇದ್ದು ಹೇಳಿದ್ದು ಆನು"

" ಥೂ ಪಟಿಂಗ, ನಿನ್ನ ಹೇಲು ಎತ್ಲೆ ಆನೆಂತ ತೋಟಿಯೋ? ಸೊಕ್ಕು ತಲಗಡರಿದ್ದು ನಿನಗೆ. ಅದರ ಇಳುಶದ್ದೆ ಆಗ" ಭಾರಿ ಕೋಪ ಬಂತು ಹೊನ್ನಕ್ಕತ್ತೆಗೆ.

"ಮತ್ತೆ ಆನು ಅಡ್ಕಂದ ತಂದ ಸಗಣದ ಶುದ್ಧಿಯೋ ನೀನು ಕೇಳುದು? ಅದಕ್ಕೊಂದಾರಿ ಕೈ ಹಾಕಿ ನೋಡು. ನಿನ್ನ ಗತಿ ಎಂತಾವುತ್ತು ಹೇಳಿ.

"ಎಂತ ಮಾಡುವೆ ನೀನು? ಆನು ಆ ಸಗಣವ ಎತ್ಯೊಂಡು ಹೋಪದು ಗೇರಂಟಿಯೇ"

"ಆನು ನಿನ್ನ ಮುಸುಡಿನ ಸಗಣಕ್ಕೆ ಅದ್ದುದೂ ಗೇರಂಟಿ"

ಹೇಳಿದ ಮಾಜಣಿ ಮಾಷ್ಟ್ರ.

ಹೊನ್ನಕ್ಕತ್ತೆಗೆ ರಜಾ ಹೆದರಿಕೆ ಆತು. ಈ ಮಾಜಣಿ ಹೇಳಿದ ಹಾಂಗೆ ಮಾಡಿರೆ. ಆ ಮುಸುಡು ತೆಕ್ಕೊಂಡು ಊರಿಂಗೆ ಹೋಪದಾದರೂ ಹೇಂಗೆ? ಎಲ್ಲಿಯೂ ಸಿಕ್ಕದ್ದೋಳು ಈ ಫಟಿಂಗನ ಹತ್ರೆ ಸಿಕ್ಕಿ ಬೀಳುವು ಹಾಂಗೆ ಆತನ್ನೆ ಹೇಳಿ ರಜಾ ದುಃಖವೂ ಆತು. ಮುಂದೆ ಮಡುಗಿದ ಹೆಜ್ಜೆಯ ಹಿಂದಕ್ಕೆ ಮಡುಗಿತ್ತು ಹೊನ್ನಕ್ಕತ್ತೆ. ಕುರುವೆಯನ್ನೂ ಕತ್ತಿಯನ್ನೂ ಅಲ್ಲಿಯೇ ಇಡುಕ್ಕಿತ್ತು.

ಮನೆಯ ಜೆಗಿಲಿಗೆ ಬಂದು 'ಉಸ್ಸಪ್ಪಾ' ಹೇಳಿ ಕೂದತ್ತು.

"ಪಾಮು ಮೆನೇಲಿ ಇಲ್ಲೆಯೋ? ಒಂದಿಷ್ಟು ಕುಡಿವಲೆ ನೀರಾದರೂ ತಂದು ಕೊಡ್ಲೆ ಹೇಳು. ಆಸರಾಗಿ ದೊಂಡ ಕಟ್ಟೆ ಸುರುವಾಯಿದು" "ಹಾಂಗೆ ಬಾ ದಾರಿಗೆ" ಇದಾ ಒಳಂದಾ ಒಂದು ಚೆಂಬು ನೀರೂದೆ ಗ್ಲಾಸುದೆ ತೆಕ್ಕೊಂಡು ಬಾ ಈ ಕತ್ತೆಗೆ ಅಲ್ಲಲ್ಲ ಹೊನ್ನಕತ್ತೆಗೆ" ಮಾಷ್ಟ್ರ ದೊಡ್ಡದನಿಲಿ ಹೆಂಡತಿಯ ದಿನಿಗೇಳಿದ.

ಅವನ ಹೆಂಡತಿ ಪರಮೇಶ್ವರಿ ಒಂದು ಚೆಂಬು ನೀರನ್ನೂ ಗ್ಲಾಸನ್ನೂ ತಂದುಕೊಟ್ಟತ್ತು. ಹೊನ್ನಕ್ಕತ್ತೆ ಗಟಗಟನೆ ನೀರು ಪೂರ್ತಿ ಕುಡುದು ಮುಗಿಶಿತ್ತು.

"ಉದಿಯಪ್ಪಾಗಳೇ ಗೆಂಟ್ಲು ಹರುದು ಹರುದು ಎನ್ನ ಬಾಯಿಲಿ ಪಸೆ ಇಲ್ಲದ್ದಾಯಿತು. ನೀನಾದ್ರೂ ರಜಾ ಬುದ್ಧಿ ಹೇಳು ಪಾಮು ಈ ಮೂರ್ಖಂಗೆ – ಎನ್ನ ಅಡ್ಕಂದ ಹೆರಿಕ್ಕೊಂಡು ಬಂದ ಸಗಣವ ಎನಗೆ ಕೊಡುವ ಹಾಂಗೆ"

"ಅವೆಲ್ಲಿ ಎನ್ನ ಮಾತು ಕೇಳ್ತವು ಅತ್ತೆ" ಅವರ ಛಲ ಅವಕ್ಕೆ ಆರ ಮಾತೂ ಕೇಳವು. ಆನು ನಿಂಗಳ ಮಧ್ಯೆ ಬಾಯಿ ಹಾಕಿ ಬೈಗಳು ತಿಂತಿಲ್ಲೆಪ್ಪ. ಅವು ಎನ್ನನ್ನೂ ಹಿಡುದು ಬೈಗು" ಹೇಳಿ ಚೆಂಬು ಗ್ಲಾಸು ತೆಕ್ಕೊಂಡು ಪರಮೇಶ್ವರಿ ಒಳಂಗೆ ಹೋತು.

ಹೊನ್ನಕ್ಕತ್ತೆ ಸೋತು ಹೋಗಿ ಸಂಧಾನಕ್ಕೆ ಬಂತು.

"ಅಪ್ಪು ಮಾಜಣಿ ಆನೂ ನೀನೂ ಒಂದೇ ಕ್ಲಾಸಿಲ್ಲಿ ಕಲ್ತವು ಅಲ್ಲದೊ? ನಿನಗೆ ನೆಂಪಿಲ್ಲೆಯೋ?

"ನೆಂಪಿಲ್ಲದ್ದೆ ಎಂತ? ನೀನು ಎರಡ್ನೇ ಕ್ಲಾಸಿಲ್ಲಿ ಇಪ್ಪಾಗಳೇ ಅಲ್ಲದೊ ನಿನ್ನ ಮದುವೆ ಮಾಡಿಕೊಟ್ಟದುಯ ಅಂಬಾಗ ನಿನಗೆ ಏಳೋ ಎಂಟೋ ವರ್ಷ ಆದಿಕ್ಕು ಅಷ್ಟೆ!"

"ಅಪ್ಪು, ಸರಿಯಾಗಿ ಹೇಳಿದೆ"

"ಮದುವೆ ಕಳುದ ಮತ್ತೆಯೂ ನೀನು ಒಂದಾರಿ ಸ್ಲೇಟು ಪುಸ್ತಕ ಹಿಡುಕ್ಕೊಂಡು ಶಾಲಗೆ ಬಯಿಂದೆ. ಅಂಬಾಗ ನಿನ್ನ ಅಬ್ಬೆ ಶಾಲಗೆ ಬಂದು ನಿನ್ನ ದರದರ ಎಳಕ್ಕೊಂಡು ಹೋಗಿ, ಮಾದೇರಿ ಬೆತ್ತಲ್ಲಿ ನಾಲ್ಕು ಬಿಗುದ್ದಿಲ್ಲೆಯೋ?

"ಹೊಲಸು ರಂಡೆ, ಮದುವೆ ಆದ ಮತ್ತೆ ಕೂಸುಗೊ ಆರಾದರೂ ಶಾಲೆಗೆ ಹೋಕೋ? ಊರವು ಎಂತ ಹೇಳುಗು? ಇನ್ನೊಂದಾರಿ ಶಾಲೆಯ ಮೆಟ್ಟು ಹತ್ತಿ ನೋಡು – ನಿನ್ನ ಸಿಗುದು ತೋರಣ ಹಾಕುವೆ ನೋಡಿಗೊ" ಹೇಳಿ ಅಬ್ಬರಿಸಿ

ಹೋಯಿದಿಲ್ಲೆಯೋ? ಅದರ ಮತ್ತೆ ಆನು ನಿನ್ನ ಕಂಡಿದಿಲ್ಲೆ" ಮಾಷ್ಟ್ರಂಗೆ ರಜಾ ರಜಾ ನೆಂಪಪ್ಪಲೆ ಸುರುವಾತು.

"ಮತ್ತೆ ಕಾಂಬಲೆ ಆನು ಮನೇಂದ ಹೆರ ಹೆರಟರಲ್ಲದೋ?

ಮನೇಲಿ ವಸ್ತ್ರ ಒಗವದು, ಉಡುಗುದು, ಉದ್ದುದು, ಹಟ್ಟಿಂದ ಸಗಣ ಕೋರುದು, ಪಾತ್ರ ತೊಳವದು ಹೀಂಗೆ ಗೆಂಡನ ಮನೆಗೆ ಹೋಪ ತಯಾರಿ ನಡಕ್ಕೊಂಡು ಇತ್ತು.

"ನೀನಂಬಾಗ ಗೆಂಡನ ಮನಗೆ ಹೋಯಿದೇ ಇಲ್ಲೆಯೋ? ಆನು ನೋಡುವಾಗಲೇ ನೀನು ಹಿಂಗೆ ತಲೆ ಬೋಳ್ಸಿಕೊಂಡು ಇತ್ತಿದ್ದೆ"

"ಹೋಗದ್ದೆ? ಒಂದೆರಡು ವರ್ಷ ಇತ್ತಿದ್ದೆ. ಅಲ್ಲಿಂದ ಎನ್ನ ಅತ್ತೆ ಬೈದು ಬಡುದು ಅಪ್ಪನ ಮನೆಗೆ ಕಳುಸಿಕೊಟ್ಟಿತ್ತು. ಅದಕ್ಕೆ ಸರಿಯಾಗಿ ಅಡಿಗೆ ಮಾಡ್ಳೆ. ಎಂಜಲು ಉದ್ದಲೆ ಎಲ್ಲಾ ಹೇಳಿ ಕೊಟ್ಟು ಕಳುಸಿ ಹೀಗೆ ಇತ್ಲಾಗಿ ದಬ್ಬೇಡಿ. ನಿಂಗೊ ಸರಿಯಾಗಿ ಹೇಳಿ ಕೊಡುವನ್ನಾರ ಅದು ಅಲ್ಲಿಯೇ ಇರಳಿ" ಹೇಳಿ ತಾಕೀತು ಮಾಡಿತ್ತು.

"ಅಂಬಾಗ ನಿನಗೆ ಎಷ್ಟು ವರ್ಷ?"

ಸರಿಯಾಗಿ ನೆಂಪು ಬತ್ತಿಲ್ಲೆ. ಎನ್ನ ಅಬ್ಬಗೆ ಮಾಂತ್ರ ಎನ್ನ ದಣುಶುದೊಂದೇ ಕೆಲಸ. ಹಟ್ಟಿಗೆ ಹೋಗಿ ಹಶುವಿನಕರೇಕು. ಸಗಣ ಎತ್ತಿ ಹಾಕೇಕು. ತೋಟಂದ ಬಾವಲಿ ಕೊಜಳಿದ ಹಣ್ಣಡಕ್ಕೆ ಹೆಕ್ಕೇಕು. ಅಶನ ಬೆಂದಿ ಮಾಡೇಕು. ಕಾಯಿ ಕಡದು ಕೊಡೇಕು. ಹೀಂಗೆ ಇಡೀ ದಿನ ಎನ್ನ ದುಡುಸಿದವದಾ"

"ಮತ್ತೆ ನಿನ್ನ ಅಬ್ಬೆ ಎಂತ ಕೆಲಸವೂ ಮಾಡ್ಯೊಂಡು ಇತ್ತಿದ್ದಿಲ್ಲೆಯೋ"

ಮಾಷ್ಟ್ರಂಗೆ ರಜಾ ಕುತೂಹಲ ತೋರಿತ್ತು.

"ಮಾಡಿಗೊಂಡಿತ್ತು - ಎರಡು ವರ್ಷಕ್ಕೆ ಒಂದೊಂದರ ಹಾಂಗೆ ಹೆತ್ತೊಂಡಿದ್ದತ್ತು; ಬಾಳಂತಿ ಚಾಕ್ರಿಯನ್ನೂ ಎನ್ನ ಕೈಲೇ ಮಾಡ್ಸೊಂಡು ಇದ್ದತ್ತು" ಗುಳಿಬಿದ್ದ ಹೊನ್ನಕ್ಕತ್ತೆಯ ಕಣ್ಣಿಲ್ಲಿ ರಜಾ ನೀರು ಒಸರಿತ್ತು. ಅದರ ಸೆರಗಿಲ್ಲಿ ಒರಸ್ಯೊಂಡತ್ತು. ಮಾಜಣಿ ಮಾಷ್ಟ್ರಂಗೆ ಈಗ ರಜಾ ಪಾಪನೇ ಹೇಳಿ ಕಂಡತ್ತು.

"ಮತ್ತೆ ನೀನು ಗೆಂಡನ ಮನೆಗೆ ಹೋಯಿದೇ ಇಲ್ಲೆಯೋ" ಕೇಳಿದ.

"ಮೂರು ಮೂರು ಸರ್ತಿ ಹೇಳಿ ಕಳುಸಿದರೂ ಆ ಗುಳಿಗ ಎನ್ನ ದಿನಿಗೇಳ್ಳೆ ಬಯಿಂದನೇ ಇಲ್ಲೆ. ಹಾಂಗೇ ಎರಡು ಮೂರು ವರ್ಷ ಕಳುದತ್ತು. ಇಂದು ಬಕ್ಕು ನಾಳೆ ಬಕ್ಕು ಹೇಳಿ ಜಾತಕ ಪಕ್ಷಿ ಹಾಂಗೆ ದಾರಿ ನೋಡುದೇ ಗತಿ ಆತು ಎನಗೆ. ಒಂದಾರಿ ಅತ್ಲಾಗಿಂದ ಆರೋ ಒಬ್ಬ ಬ್ರಾಹ್ಮಣ ಬಂದವ ಹೇಳಿದ. ಆ ಮುಜುಡಂಗೆ ಇನ್ನೊಂದು ಮದುವೆ ಆಯಿದಾಡ. ಒಂದು ಕೂಸೂ ಇದ್ದಾಡ ಹೇಳಿ. ಎನ್ನ ಎದೆ ಧಸಕ್ಕ ಹೇಳಿತ್ತು. ಅಂದು ಎಡಿಗಾದಷ್ಟು ಕಣ್ಣೀರು ಹಾಕಿದ್ದೆ" ಹೊನ್ನಕತ್ತೆ ಕಣ್ಣಿಲ್ಲಿ ಮತ್ತೆ ನೀರು ಉದುರಿತ್ತು.

"ಎನ್ನ ಅಬ್ಬೆ ಅಪ್ಪ ಎನ್ನ ಜರಿವಲೆ ಸುರು ಮಾಡಿದವು"

"ಆತು ಅನಿಷ್ಟ ಮುಂಡೆ. ನಿನ್ನ ಹಣೆ ಬರಕ್ಕೆ ಇಷ್ಟೇ ಆತು. ಇನ್ನು ಸಾವನ್ನಾರ ಕೂಳಿಂಗೆ ಇಲ್ಲಿಯೇ ಬೀಳು" ಹೇಳಿದ ಅಪ್ಪ.

"ಅದು ಸರಿಯಾಗಿ ಮೈಮುರುದು ಕೆಲಸ ಮಾಡದಿದ್ದರೆ ಅದಕ್ಕೆ ಚೋರು ಹಾಕೇಡ. ಮಿನಿಯಾ ಹೇಳಿ ಅಬ್ಬಗೆ ತಾಕೀತು ಮಾಡಿದ ಅಪ್ಪ. ಅಬ್ಬೆ ಬೇರೆನೆ ಕೂಗಿತ್ತು.

" ನೀನೆಂತಕೆ ಕೂಗುತ್ತೆ ಸಾಕು. ನವಗೆ ಹನಿಕೆಲಸಕ್ಕೆ ಒಂದು ಜೆನ ಬೇಡದೊ? ಅದಕ್ಕಾತು" ಹೇಳಿ ಅಪ್ಪ ಕೈ ಕುಡುಗಿ ಹೋದ.

"ಅದಪ್ಪು. ಹೊನ್ನಕ್ಕ ನಿನ್ನ ಕೊಟ್ಟದಾದರೂ ಎಲ್ಲಿಗೆ?" ಮಾಷ್ಟ್ರಂಗೆ ಕುತೂಹಲ ಆತು.

"ಅದೆಲ್ಲೋ ಪಂಗಲಪಾಡಿಂದ ರಜಾ ಮುಂದೆ. ಮದಂಗಲ್ಲಿಂಗೆ ಹತ್ರೆ. ಎನಗೀಗ ಅಲ್ಯಾಣ ದಾರಿ ಕೂಡ ನೆಂಪು ಬತ್ತಿಲ್ಲೆ"

"ನಿನ್ನ ಅಪ್ಪ ಅತ್ಲಾಗಿ ಹೋಗಿ ಒಂದಾರಿಯೂ ವಿಚಾರ್ಸಿದ್ದಾ ಇಲ್ಲೆಯೋ"

"ಊರವೆಲ್ಲಾ ಬಂದು ಒತ್ತಾಯ ಮಾಡಿದ ಮತ್ತೆ ಒಂದಾರಿ ಅಪ್ಪನ ಸವಾರಿ ಅತ್ಲಾಗಿ ಹೋಗ್ಯೊಂಡು ಬಂತು"

"ನಿನಗೆ ಅಶನಾರ್ಥ-ಜೀವನಾಂಶ ಹೇಳಿ ಎಂತದೂ ಕೊಟ್ಟಿದವಿಲ್ಲೆ ಯೋ?"

"ಎಂತದೂ ಇಲ್ಲೆ. ಒಂದು ಸಾವಿರ ರೂಪಾಯಿಯ ಅಪ್ಪನ ಕೈಲಿ ಮಡುಗಿ ಕೈಮುಗುದವಡಾ' ಎಂಗಳ ಮಾಣಿ ನಿಂಗಳ ಮಗಳ ಮನಗೆ ಕರಕ್ಕೊಂಡು ಬಪ್ಪಲೆ

ಸರ್ವಥಾ ಒಪ್ಪುತ್ತಾ ಇಲ್ಲೆ. ಆ ಕರ್ಗುಡಿ ಕೂಸು ಎನಗೆ ಬೇಡ ಹೇಳಿ ಹಠ ಹಿಡುದ. ಹಾಂಗಾಗಿ ಅವಂಗೆ ಎಂಗೊ ಇನ್ನೊಂದು ಕೂಸಿನ ಹುಡುಕ್ಕಿ ಮದುವೆಯೂ ಮಾಡಿದೆಯೊ ಅವೀಗ ಸುಖಲ್ಲಿ ಇದ್ದವು. ಇನ್ನೊಂದಾರಿ ಇತ್ಲಾಗಿ ಮೋರೆ ಹಾಕೇಡಿ ಹೇಳಿಯೂ ಹೇಳಿದವಾಡ"

"ಅಪ್ಪೊ ಇಷ್ಟೆಲ್ಲಾ ದೊಡ್ಡಕತೆ ಆಯಿದೋ ನಿನ್ನದು. ಎನಗೆ ಗೊಂತೇ ಇತ್ತಿಲ್ಲೆ ಹೊನ್ನಕ್ಕ" ಹೇಳಿದ ಮಾಷ್ಟ್ರ.

ಇನ್ನೆಂತ ಅಪ್ಪಲಿದ್ದು ಎನಗೆ? ಅಪ್ಪನ ಮನೆಯ ಕೂಳಿಂಗೆ ಬಿದ್ದೆದ. ಉದಿಂದ ಕಸ್ತಲೆವರೆಗೆ ಆಳು ದುಡುದ ಹಾಂಗೆ ದುಡುದರೆ ಕೂಳು ಕಂಡುಕೊಂಡು ಇತ್ತಿದ್ದೆ. ಕೆಲಸ ಸರಿಯಾಗದಿದ್ದರೆ ಅಪ್ಪ ತಲಗೆ ಹೆಚ್ಚೊಂಡು, ಬೆತ್ತಲ್ಲಿ ಬಡುಕ್ಕೊಂಡು ಇತ್ತಿದ್ದ. ಅಬ್ಬೆ ಬಾಯಿಗೆ ಬಂದ ಹಾಂಗೆಲ್ಲಾ ಬೈಕ್ಕೊಂಡು ಇತ್ತು. ಅವರ ನೋಡಿರೆ ಎನಗೆ ಅಬ್ಬೆ ಅಪ್ಪನ ಹಾಂಗೆ ಆಯ್ಕೊಂಡು ಇತ್ತಿಲ್ಲೆ. ಎನ್ನ ಪಾಲಿನ ಯಮದೂತಂಗೊ ಹೇಳಿಯೇ ಕಂಡುಕೊಂಡು ಇತ್ತು."

"ಅಂಬಾಗ ನಿನ್ನ ಗೆಂಡ ಸತ್ತದು ಯಾವಾಗ" ಹೇಂಗೆ ಗೊಂತಾತು?

"ಅದು ಎಂದು ಪ್ರಾಣ ಬಿಟ್ಟತೋ ಆರಿಂಗೆ ಗೊಂತು? ಅಲ್ಲಿಂದ ಬಂದವು ಆರೋ ಹೇಳಿದವು. ಅವ ಸತ್ತು ಒಂದು ವರ್ಷ ಆತು ವರ್ಷಾಂತವೂ ಕಳುತ್ತು' ಹೇಳಿ. ಅದರ ಕೇಳಿ ಅಪ್ಪ ಮಾಡಿದ ಮದೂಣ ಕೆಲಸ ಹೇಳಿರೆ ಕಣ್ಯಾರಂದ ಕೆಲಸಿಯ ಬಪ್ಪಲೆ ಹೇಳಿ ಎನ್ನ ಹಿಡುದು ಮಡುಗಿ ತಲೆ ಬೋಳ್ಸಿದ್ದು. ಕೆಮಿಲಿಪ್ಪ ಕುಡುಕ್ಕು, ಕೈಲಿಪ್ಪ ಬಳೆಯ ಪೀಂಕ್ಸಿ ಮಡುಗಿದ್ದು. ಒಂದು ಜೋಡು ಬೆಳಿ ಸೀರೆಗಳ ತಂದುಕೊಟ್ಟು ಇನ್ನು ಮುಂದೆ ನೀನು ಇದನ್ನೇ ಸುತ್ತೇಕು. ಇದು ಗೆಂಡ ಸತ್ತವಕ್ಕೆ ಮಾಡುವ ಕ್ರಮ ಹೇಳಿದ. ಅಂಬಾಗ ಒಂದಾರಿ ಎನಗೆ ತಡವಲೆಡಿಯದ್ದ ದುಃಖ ಆತು. ಬಿಕ್ಕಿಬಿಕ್ಕಿ ಕೂಗಿದೆ. ಅಶನ ನೀರು ಇಲ್ಲದ್ದೆ ಎರಡು ದಿನ ಕಳುದೆ."

ಹೆರಂದಲೇ ಅಪ್ಪ ಎನಗೆ ಬೈಗಳ ಸಹಸ್ರಾರ್ಚನೆ ಮಾಡಿದ.

"ನೀನು ಉಪಾಸ ಬಿದ್ದರೆ, ಸತ್ತರೆ ಆರಿಂಗೂ ನಷ್ಟ ಆಗ. ಒಳ್ಳೆ ಮನೆ ನೋಡಿಯೇ ನಿನ್ನ ಕೊಟ್ಟದು. ನಿನ್ನ ಹಣೆಬರಹ ಸರಿ ಇಲ್ಲದ್ದಕ್ಕೆ ಆರೆಂತ ಮಾಡ್ಳೆ ಸಾಧ್ಯ ಇದ್ದು? ಈಗ ಬಂದದರ ಅನುಭವಿಸು" ಹೇಳಿದ್ದು ಅಪ್ಪನೇ.

"ಇನ್ನೆನಗೆ ಬೇರೆ ದಾರಿ ಎಂತ ಇತ್ತು? ಮದ್ಲಾಣ ಹಾಂಗೆ ಎದ್ದು ಓಡಾಡ್ಳೆ ಸುರು ಮಾಡಿದೆ. ಸುರುಸುವಿಲ್ಲಿ ಕನ್ನಾಟಿಲ್ಲಿ ಎನ್ನ ಮೋರ ಕಂಡು ಎನಗೇ ಹೆದರಿಕೆ ಆತು. ಮತ್ತೆಂದೂ ಆನು ಕನ್ನಾಟಿ ನೋಡಿದ್ದೇ ಇಲ್ಲೆ."

“ನಿನ್ನ ಅಬ್ಬೆ ನಾಲ್ಕೈದು ಹೆತ್ತಿದ್ದು ಹೇಳಿದ್ದೆ. ಈಗ ಇಪ್ಪದು ನಿನಗೆ ಒಬ್ಬನೇ ತಮ್ಮ ಎಂಕಟ ಅಲ್ಲದೋ?” ಮಾಷ್ಟ್ರ ನೆಂಪು ಮಾಡಿ ಕೇಳಿದ.

“ಅಪ್ಪು. ಒಳುದ್ದು ಅವ ಒಬ್ಬನೇ. ಬಾಕಿ ಎಲ್ಲಾ ಮಣ್ಣಡಿಂಗೆ ಹೋಯಿದವು. ಹಾಂಗಾಗಿ ಎಂಕಟನ ಕೊಂಡಾಟ ಅತಿ ಮಾಡಿದವು.

“ಅವ ಶಾಲಗೆ ಹೋಯಿದನೇ ಇಲ್ಲೆಯೋ?”

“ಶಾಲಗೆ ಹೋಪತಿ ಅಬ್ಬೆ ಬಿಟ್ರಲ್ಲದೋ?” ಎನ್ನ ಒಂದು ಪಿಂಡನ ಆನು ಶಾಲಗೆ ಕಳುಸುತ್ತೇ ಇಲ್ಲೆ. ಅಲ್ಲಿ ಮಾಷ್ಟ್ರಕ್ಕಳ ಕೈಲಿ ಪೆಟ್ಟು ತಿಂಬಲೆ ಆನು ಬಿಡೆ ಹೇಳಿ ಮನೇಲಿಯೇ ಕೂರ್ಸಿತ್ತು. ಹಾಂಗಾಗಿ ಅವ ಹೆಡ್ಡನೂ ದಡ್ಡನೂ ಆಗಿ ಬೆಳದ. ಕೂರು ಹೇಳಿರೆ ಕೂರುಗು ನಿಲ್ಲು ಹೇಳಿರೆ ನಿಂಗು. ತಿಂಬಲೆ ಮಾಂತ್ರ ಅರಡಿವದು ಅವಂಗೆ–”

“ಅವನ ಹೆಂಡತಿಯೊ?”

“ಅದೂ ಹಾಂಗಿದ್ದದೆ. ಇಂತಾ ಡಮೇಢ್ಯಂಗೆ ಮತ್ತೆ ಹೇಂಗಿಪ್ಪ ಕೂಸು ಸಿಕ್ಕುಗು? ಪಾತ್ರೆಯ ಒಲಗೆ ಕಮ್ಚಿ ಮಡುಗೇಕೋ ಮೊಗಚ್ಚಿ ಮಡುಗೇಕ್ಕೋ ಹೇಳಿ ಅರಡಿಯದ್ದ ಹೆಡ್ಡಿ”

“ಹಾಂಗಾರೆ ಈಗ ನಿನ್ನ ಅಬ್ಬೆ ಅಪ್ಪ ಇಲ್ಲೆನ್ನೆ; ಮನೆಯ ವೈವಾಟು ಎಲ್ಲಾ ನೋಡಿಗೊಂಬುದು ಆರು? ಎಲ್ಲಾ ನಿನ್ನ ಕೈಲಿಯೇ ಇದ್ದೊ”

“ಗೊಂತಿದ್ದುಕೊಂಡು ಕೇಳ್ತೆನೆ ಮಾಜಣಿ ನೀನು. ಮನೆಯ ಆಡಳಿತ ಎನ್ನ ಕೈಲೇ ಇಪ್ಪದು. ತಮ್ಮನನ್ನು ಅವರ ಹೆಂಡತಿಯನ್ನೂ ಮೂಲಗೆ ಅಮರ್ಸಿದ್ದೆ. ಅಬ್ಬೆ ಅಪ್ಪ ಎನ್ನ ಹೇಂಗೆ ದಂಡುಸೇಂಡು ಇತ್ತಿದ್ದವೋ ಹಾಂಗೇ ಅವರನ್ನೂ ದಂಡುಸುತ್ತಾ ಇದ್ದೆ.”

“ಹಾಂಗೆ ಮಾಡುದು ತಪ್ಪಲ್ಲದೋ ಹೊನ್ನಕ್ಕ. ದೇವರು ಮೆಚ್ಚದ್ದ ಕೆಲಸ ಅಲ್ಲದೋ?”

“ತಪ್ಪೊ? ತಪ್ಪು ಹೇಂಗಾವುತ್ತು ಮಜಣಿ? ಎನ್ನ ಅಬ್ಬೆ ಅಪ್ಪ ಹೇಂಗೆ ದಂಡುಸಿದ್ದವು. ಹಾಂಗೇ ಅವರ ಪಿಂಡನನ್ನೂ ದಂಡುಸೇಕು ಹೇಳಿ ಎನ್ನ ಮನಸ್ಸಿಲ್ಲಿ ಕೊದಿತ್ತು” ಹೊನ್ನಕ್ಕತ್ತೆಯ ಮೋರೇಲಿ ಕೋಪ ಕುದುದತ್ತು. ಕಣ್ಣು ಕೆಂಪು ಮಾಡಿತ್ತು ಒಂದಾರಿ.

"ಅವಕ್ಕೆ ಎನ್ನ ಮೇಗೆ ರಜಾದರೂ ಕನಿಕರ ಇತ್ತೊ? ಒಳ್ಳೆ ದನಕ್ಕೆ ಬಡುದ ಹಾಂಗೆ ಬಡುದು ಕೂಳು ಹಾಕಿದವು. ಅವು ಎನ್ನ ಅಬ್ಬೆ ಅಪ್ಪ ಆಗಿತ್ತಿದ್ದವಿಲ್ಲೆ. ಎನ್ನ ಪಾಲಿಂಗೆ ಶತ್ರುಗೊ ಆಗಿತ್ತದ್ದವು. ಕನಿಕರ ಹೇಳುದರ ಯಾವ ಮೂಲಗೂ ಆನು ಕಂಡಿದಿಲ್ಲೆ. ಹಾಂಗಾಗಿ ಅವರ ಪಿಂಡನ ದಣುಶಿದಷ್ಟೂ ಎನಗೆ ಖುಷಿ ಅಪ್ಪದು. ಮನೆ ಕೆಲಸ, ದನಗಳ ಚಾಕ್ರಿ, ತೋಟದ ಕೆಲಸವ ಎಲ್ಲಾ ಅವರ ಕೈಲೇ ಮಾಡ್ಸುತ್ತೆ." ಒಂದೇ ಉಸುರಿಂಗೆ ಹೊನ್ನಕ್ಕತ್ತೆ ಹೇಳಿ ಮುಗುಶಿತ್ತು."

"ಮತ್ತೆ ನೀನೆಂತರ ಮಾಡುದು."

"ಮನೆಯ ಎಲ್ಲಾ ವ್ಯೆವಾಟು ಎನ್ನ ಕೈಲಿಯೇ ಇದ್ದು"

"ಅದೆಲ್ಲಾ ಅಪ್ಪು. ನೀನು ಹೊನ್ನಮ್ಮ ಹೇಳಿ ಇದ್ದದು ಹೊನ್ನಕ್ಕತ್ತೆ ಆದ್ದು ಯಾವಾಗ? ಇದೊಂದರ ಹೇಳಿ ಮುಗುಶು."

ಮಾಜಣಿ ಮಾಷ್ಟ್ರಂಗೆ ಈಗ ಹೊನ್ನಕ್ಕತ್ತೆಯ ಮೇಲೆ ಕೋಪ ಇಲ್ಲೆ. ಕನಿಕರ ಬಂತು. ಈ ಹೆಮ್ಮಕ್ಕೊ ಕಷ್ಟ ತಿಂದೇ ಈ ರೀತಿ ಆದ್ದು ಹೇಳುದು ಅರ್ಥ ಆತು. ಆಗಾಣ ಕಾಲಲ್ಲಿ ವಿಧವೆಗಳ ಹೇಂಗೆ ನೋಡಿಗೊಂಡು ಇತ್ತಿದ್ದವು ಹೇಳುದರ ಕಲ್ಪನೆ ಆತು. ಅವರ ಯಾವ ಆಸೆ ಆಕಾಂಕ್ಷೆಯೂ ನೆರವೇರದ್ದೆ ಮುರುಟಿ ಹೋದವನ್ನೆ ಹೇಳಿ ಸಂಕಟವೂ ಆತು. ಅರಳೇಕಾದ ಹೂಗಿನ ಮುಗುಟಿಪ್ಪಗಳೇ ಹರುಂಬಿ ಹಾಕುತ್ತವನ್ನೇ ಹೇಳಿ ಬೇಜಾರವೂ ಆತು.

"ಇನ್ನೊಂದು ಪ್ರಶ್ನೆ ಬಾಕಿ ಉಳುದ್ದನ್ನೆ ಹೊನ್ನಕ್ಕ"

"ಕೇಳು, ಅದಕ್ಕೂ ಉತ್ತರ ಕೊಡುತ್ತೆ."

"ನೀನು ಹೊನ್ನಮ್ಮ ಹೇಳಿ ಇದ್ದದು ಹೊನ್ನಕ್ಕತ್ತೆ ಹೇಂಗಾದೆ?

ಅದರೊಂದಾರಿ ಹೇಳಿಕ್ಕು"

"ಇದಾ ಮಾಜಣಿ ಮತ್ತೆ ಎನ್ನ ಕೆಣಕ್ಕಲೆ ಸುರುಮಾಡಿದೆಯೋ?"

ಮದಲು ಮದಲು ಜೆನಂಗೊ ಎನ್ನ ಹೊನ್ನಕ್ಕ ಹೇಳಿ ದಿನಿಗೇಳ್ಳೊಂಡು ಇತ್ತಿದ್ದವು. ಮತ್ತೆ ಅವರ ಮಕ್ಕೊ ಎಲ್ಲಾ ಎನ್ನ ಹೊನ್ನಕ್ಕತ್ತೆ ಹೇಳಿ ದಿನಿಗೇಳ್ಳೆ ಸುರು ಮಾಡಿದವು. ಈಗ ಎಲ್ಲೋರಿಂಗೆ ಆನು ಹೊನ್ನಕ್ಕತ್ತೆಯೇ ಆದೆ ಅಷ್ಟೆ. ಈಗ ಎನಗೆ ವಯಸ್ಸಾತದ. ಅರವತ್ತು ದಾಂಟಿತ್ತು. ನಿನಗೆ ಎನ್ನ ಪುರಾಣ ಹೇಳಿ ಹೇಳಿ ದೊಂಡೆ

ನೀರು ಆರಿತ್ತು. ಇನ್ನೊಂದು ಚೆಂಬು ನೀರು ತಪ್ಪಲ್ಲೆ ಹೇಳು ಪಾಮುಗೆ" ಹೇಳಿತ್ತು.

"ಇನ್ನು ನೀರು ಕುಡಿಯೇಡ ಹೊನ್ನಮ್ಮ ಒಳಂಗೆ ಬಾ. ಮನೇಲಿ ಬೆಶಿ ಬೆಶಿ ದೋಸೆಯೂ ಕಾಯಿ ಚಟ್ನಿಯೂ ಇದ್ದು. ಇಬ್ರೂ ಹೊಟ್ಟೆ ತುಂಬಾ ತಿಂಬೊ" ಹೇಳಿ ಮಾಷ್ಟ್ರ ಹೊನ್ನಕ್ಕತ್ತೆಯ ಒಳಂಗೆ ಕರಕ್ಕೊಂಡು ಹೋಗಿ ದೋಸೆ ಚಟ್ನಿ ತಿನ್ಸಿದ. ಗಿಂಡಿ ತುಂಬಾ ಕಾಫಿಯನ್ನೂ ಕುಡುಶಿದ. ಹೊನ್ನಕ್ಕತ್ತೆಗೆ ಹೊಟ್ಟೆ ತುಂಬಿ 'ಡರ್ ಡರ್' ಹೇಳಿ ತೇಗು ಬಂತು.

"ಆನಿನ್ನು ಮನಗೆ ಹೋವುತ್ತೆ ಮಾಜಣಿ. ಹೊತ್ತು ನೆತ್ತಿಗೆ ಬಂತು ಹೇಳಿ ಸಗಣದ ಕುರುವೆಯನ್ನೂ, ಕತ್ತಿಯನ್ನೂ ಹಿಡ್ಕೊಂಡು ಎದ್ದು ಜಾಲಿಂಗೆ ಇಳುದತ್ತು.

"ಅಂಬಾಗ ನಿನಗೆ ಸಗಣ ಬೇಡದೋ?" ನೆಗಾಡ್ಯೊಂಡೇ ಕೇಳಿದ ಮಾಷ್ಟ್ರ"

"ಸಾಕು ನಿನ್ನ ಕುಶಾಲು ಮಾಜಣಿ, ಎನಗೆ ಸಗಣವೂ ಬೇಡ. ಎಂತದೂ ಬೇಡ. ನೀನೊಬ್ಬನೆ ಎನ್ನ ಕತೆಯ ಇಷ್ಟು ಚೆಂದಕ್ಕೆ ಕೇಳಿದ್ದು. ಎನ್ನ ಮನಸ್ಸಂಗೂ ರಜಾ ಹಗುರ ಆತು ನಿನಗೆ ವಾರಕ್ಕೆ ಒಂದೊಂದು ಹೆಡಗೆ ಸಗಣವ ಆನೇ ತಂದು ಸುರಿವೆ. ನೀನು ಸುಮ್ಮನೇ ಕಷ್ಟ ಪಡೇಡ ಆತೊ? ಆನಂಬಾಗ ಹೋವುತ್ತೆ ಆತೋ" ಹೇಳಿ ಹೊನ್ನಕ್ಕತ್ತೆ ಜಾಲಿಂದ ಮುಂದಕ್ಕೆ ನೆಡತ್ತು.

ಮಾಜಣಿ ಮಾಷ್ಟ್ರ ಅದು ಹೋದ ದಾರಿಯನ್ನೇ ರಜಾ ಹೊತ್ತು ನೋಡಿಕ್ಕಿ, ಮನೆ ಒಳಂಗೆ ಹೋದ. ಹೊನ್ನಕ್ಕನ ಒಳ ಇನ್ನೆಷ್ಟು ಬೇನೆ ಇದ್ದೋ ಹೇಳಿ ಚಿಂತಿಸಿದ.



# ಗೌಡರ ಮನೇಲಿ ಕಳವು

ಅಂದು ಬಂದಷ್ಟು ಪಿಸುರು ಇವರ ಮೇಗೆ ಎನಗೆ ಎಂದೂ ಬಯಿಂದಿಲ್ಲೆ. ಎನಗೆ ದುಃಖ ತಡವಲೆ ಎಡಿಯದ್ದಾಯಿದು. ಕಣ್ಣಿಂದ ನೀರು ಇಳುದು ಒಂದು ಹೊಳೆಯೇ ಆದಿಕ್ಕು. ಕೈಲಿ ಹಿಡಕ್ಕೊಂಡ ಟುವಾಲು ಕಣ್ಣೀರೆಸಿ ಒರಸಿ ನೆನದು ಮುದ್ದೆ ಆಗಿ ಹೋಯಿದು. ಆದರೂ ಎನ್ನ ದುಃಖ ಶಮನ ಹೇಳಿ ಆಯಿದಿಲ್ಲೆ.

ಎಂಗೊ ಗುಲ್ಬರ್ಗಾ ಜಿಲ್ಲೆಯ ಚಿತಾಪುರ ಹೇಳುವ ತಾಲೂಕಿನ ಕೇಂದ್ರಲ್ಲಿ ಆಸ್ಪತ್ರೆ ನೆಡಶುದು ಹತ್ತು ವರ್ಷ ಅದಿಕ್ಕು. ಸುತ್ತುಮುತ್ತಾಣ ಹಳ್ಳಿಂದ ರೋಗಿಗೊ ಹಿಂಡು ಗಟ್ಟೆ ಬಂದೊಂಡು ಇತ್ತಿದ್ದವು. ಪೈಸೆಯೂ ಸರಿಯಾಗಿ ಕೊಡ್ತಿದ್ದವು. ಆದರೆ ಒಂದಾರಿ ಆದರೂ ಎಂಗಳ ಬೇಂಕಿನ ಖಾತೆಲಿ ನೂರು ರೂಪಾಯಿಗಿಂತ ಹೆಚ್ಚು ಜಮಾ ಆದ್ದರ ಆನು ಕಂಡಿದ್ದಿಲ್ಲೆ. ಮನೆ ಬಾಡಿಗೆ, ಆಸ್ಪತ್ರೆ ಬಾಡಿಗೆ, ಕರೆಂಟು ಬಿಲ್ಲು, ನೀರಿನ ಬಿಲ್ಲು, ನರ್ಸಿನ ಸಂಬಳ, ಮದ್ದು ತಪ್ಪ ಖರ್ಚು, ಮನೆ ಕರ್ಚು ಎಲ್ಲಾ ಅಪ್ಪಾಗ ಅದದು ತಿಂಗಳಿಂದು, ಅದದು ತಿಂಗಳಿಂಗೇ ಮುಗುಕ್ಕೊಂಡು ಇತ್ತು. ಎನ್ನ ಮನೆಯೋರಿಂಗೆ – ರೋಗಿಗೋಕ್ಕೆ ಹೆಚ್ಚು ಚಾರ್ಜು ಮಾಡ್ಲಾಗ. ಪಾಪದವು, ಬಡವರು ಹೇಳಿ ಕಂಡರೆ, ಮದ್ದೂ, ಇಂಜೆಕ್ಷನ್ ಕೊಟ್ಟು ಒಂದು ಪೈಸೆಯೂ ತೆಕ್ಕೋಳದ್ದೆ ಹಾಂಗೇ ಕಳುಸುಗು. ಹಾಂಗಾಗಿ, ಪೈಸೆ ಉಳುಕ್ಕೊಂಡು ಇತ್ತಿಲ್ಲೆ. ಪ್ರತಿ ತಿಂಗಳೂ ಅಖೇರಿ ಅಪ್ಪಾಗ ಹರಹರ ಮಹಾದೇವ' ಹೇಳಿ ಆಯ್ಕೊಂಡು ಇತ್ತು.

ಎನ್ನ ಕೊರಳ ಕರ್ಮಣಿ ಕಡುದು ಆರು ತಿಂಗಳೇ ಕಳುತ್ತು. ಅದೂ ಇವು ಮಾಡ್ಸಿ ಹಾ ದ್ದಲ್ಲ. ಎನ್ನ ಅಪ್ಪ ಮಾಡ್ಸಿ ಕೊಟ್ಟದು. ಅದರಲ್ಲಿ ಎರಡು ಪವನಿದ್ದರೂ ನಿತ್ಯ ಹಾಕುವ ಕಾರಣ ತಳದು, ಕಡುದು ಬಿದ್ದತು. ಒಂದು ಅರ್ಧ ಪವನು ಬಂಗಾರ ಸೇರ್ಸಿ ಅದರ ರಿಪೇರಿ ಮಾಡ್ಸಿ ಕೊಡಿ ಹೇಳಿ ಇವಕ್ಕೆ ಹೇಳಿದರೆ

"ಕರ್ಮಣಿಗೆ ಬಂಗಾರವೇ ಬೇಕು ಹೇಳಿ ಇಲ್ಲೆ. ನೈಲಾನು ದಾರಲ್ಲಿಯೂ ಪೋಣಿಸಿ ಹಾಕಲಾವುತ್ತು. ಈಗಾಣ ಕಾಲಲ್ಲಿ ಬಂಗಾರ ಹಾಯ್ಕೊಂಡು ತಿರುಗಿದರೆ ಕಳ್ಳಕಾಕರ ಭಯ" ಹೇಳಿದವು.

"ಆತಪ್ಪ ಹಾಂಗೆ ಮಾಡುತ್ತೆ" ಹೇಳಿ ಮರು ಮಾತಾಡದ್ದೆ ದಾರಲ್ಲಿಯೇ ಪೋಣ್ಸಿ ಕೊರಳಿಂಗೆ ಹಾಯ್ಕೊಂಡೆ.

"ಆರಾರು ನೋಡಿದರೆ ಎಂತ ಹೇಳುಗು? ಡಾಕ್ಟ್ರತ್ತಿಯ ಕತ್ತಿನಾಗ ಒಂದೆಳೆ ಬಂಗಾರನೂ ಇಲ್ಲ ಹೇಳವೋ" ಹೇಳಿ

"ಎಂತದೂ ಹೇಳವು. ಇಷ್ಟು ಸಂಪಾದನೆ ಇದ್ದರೂ ಡಾಕ್ಟ್ರತ್ತಿ ಎಷ್ಟು ಸರಳ ಹೇಳಿ ನಿನ್ನ ಕೊಂಡಾಡುಗು? ಕೊರಳಿಲ್ಲಿ ಕರ್ಮಣಿ ಇದ್ದರೆ ಸಾಕು" ಹೇಳಿ ಎನ್ನ ಬಾಯಿ ಮುಚ್ಚಿಸಿದವು.

ಚಿತಾಪುರಂದ ಮೂರು ಮೈಲು ದೂರಲ್ಲಿ ಮರುಗೋಳು ಹೇಳು ಹಳ್ಳಿ ಇದ್ದು. ಅಲ್ಲಿಂದಲೂ ಸುಮಾರು ಜೆನ ರೋಗಿಗೊ ಎಂಗಳ ಆಸ್ಪತ್ರೆಗೆ ಬಂದೊಂಡು ಇತ್ತಿದ್ದವು. ಅವರ ಪೈಕಿ ಬಸವಣ್ಣಪ್ಪ ಗೌಡ ಹೇಳುವ ರೋಗಿಯೂ ಅಂಬಾಗಂಬಾಗ ಬಂದುಗೊಂಡು ಇತ್ತಿದ್ದ. ಸುತ್ತಿದ ಕಂಪಣಿ ಹರುಕ್ಕು ಧೋತಿ, ಹರುಕ್ಕಡ ಅಂಗಿ, ತಲಗೊಂದು ಕಂದು ಟೊಪ್ಪಿ ಮಡಿಕ್ಕೊಂಡು ಬಕ್ಕು. ಅದರ ಕಂಡು ಕಡು ಬಡವನೇ ಆದಿಕ್ಕು ಹೇಳಿ ಎಂಗೊ ತೀರ್ಮಾನಕ್ಕೆ ಬಂದೆಯೊ. ಹತ್ತು ರೂಪಾಯಿ ಚಾರ್ಜು ಮಾಡಿದರೆ ಐದು ರೂಪಾಯಿ ಕೊಟ್ಟಿಕ್ಕಿ ಹೋಕು. ಕೆಲವು ಸರ್ತಿ "ಈ ಸಲ ದಾಮು ತಂದಿಲ್ಲಾರೀ, ಮುಂದಿನ ಸಲ ಬಂದಾಗ ಕೊಡ್ತೇನ್ರಿ" ಹೇಳುವ ಕ್ರಮವೂ ಇತ್ತು." ಪಾಪ, ಬಡವ ಆದಿಕ್ಕು. ಹೆಚ್ಚು ಒತ್ತಾಯ ಮಾಡೇಡ' ಹೇಳಿ ಎನ್ನ ಮನೆಯವರ ಉಪದೇಶವೂ ಇರುತ್ತು. ತನ್ನ ಹೆಂಡತಿ ಮಕ್ಕಳನ್ನೂ ಕಟ್ಯೊಂಡು ಬಂದು ಮದ್ದು ಮಾತ್ರೆ ಇಂಜೆಕ್ಷನ್ ಕೊಡ್ಸಿ, ತಾರಮ್ಮಯ್ಯ ಹೇಳಿ ಪೈಸೆ ಕೊಡದ್ದೆ ಹೋದ್ದೂ ಇದ್ದು. ಇರಳಿ. ಮುಂದಾಣ ಸಂಗತಿ ಹೇಳುತ್ತೆ.

ಅಂದು ಉದಿಯಪ್ಪಾಗಳೇ ಮರುಗೋಳಿಂದ ಬಂದ ರೋಗಿ, ಒಂದು ವರ್ತಮಾನ ಹೇಳಿತ್ತು. "ಯವ್ವಾ ಬಸಣ್ಣಪ್ಪ ಗೌಡ ಮನೇಂದ ಎರಡು ಸೇರು

ಬಂಗಾರ ಕಳವಾಗೇದ್ರಿ, ಅದಕ್ಕೆ ಪೋಲಿಸಿನೋರು ಬಂದಾರ್‍ರಿ, ಜನ ಜಾತ್ರೆ ಆಗೇದ್ರಿ" ಹೇಳಿತ್ತು.

ಎನಗೆ ಒಂದಾರಿ ಮೂರ್ಛೆ ಬಂದ ಹಾಂಗೆ ಆತು. ಆರ ಎಂಗೊ ಬಡವ ಹೇಳಿ ಜಾನ್ಸಿ, ಕನಿಕರ ತೋರ್ಸೋಂಡು ಇತ್ತಿದ್ದೆಯೋ ಅದೇ ಬಸಣ್ಣಪ್ಪ ಗೌಡ ಹೇಳಿ ಗೊಂತಾತು.

"ಅವ್ರು ಅಷ್ಟು ಶ್ರೀಮಂತರೋ?" ಪ್ರಶ್ನೆ ಹಾಕಿದೆ.

"ಹೌದವ್ವಾ ಅವ್ರು ಊರಿಗೇ ದೊಡ್ಡ ಸಾವ್ಕಾರ್‍ರು, ಕನಿಷ್ಟ ಅಂದ್ರ ಶಂಭರು ಕೂರಿಗೆ ಜಮೀನು ಐತ್ರಿ, ನೂರು ಚೀಲ ಜೋಳ, ಪನ್ನಾಸು ಚೀಲ ತೊಗ್ರಿ ಅಡ್ತಿಗೆ ಹಾಕ್ತಾನ್ರಿ" ಹೇಳಿತ್ತು ಅಲ್ಲಿಂದ ಬಂದ ಹೆಮ್ಮಕ್ಕೊ.

ಎನಗೆ ದುಃಖ ಆದ್ದು ಬೇರೆ ಯಾವುದಕ್ಕೂ ಅಲ್ಲ. ಅದೇ ಕಳ್ಳರು ಎಂಗಳ ಮನೆಗೆ ನುಗ್ಗುತ್ತಿದ್ದರೆ ಎಂಗಳ ಮರ್ಯಾದೆ ಬೀದಿ ಪಾಲಾವುತ್ತಿತ್ತು. ಒಂದು ಪವನು ಬಂಗಾರ ಆದರೂ ಸಿಕ್ಕುತ್ತಿತ್ತೋ ಅವಕ್ಕೆ ಹೇಳಿ. ಬೇಶಿ ತಿಂಬ ನಾಲ್ಕು ಪಾತ್ರೆ ಬಿಟ್ರೆ ಬೇರೆ ಎಂತದೂ ಸಿಕ್ಕುತ್ತಿತ್ತಿಲ್ಲೆ.

"ಡಾಕ್ಟರ್ ಸಾಬ್ರ ಮನೇಲಿ ಕಳ್ಳತನ ಆಗ್ಯಾದಂತ್ರಿ, ಅಲ್ಲಿ ಏನೇನೂ ಇಲ್ಲಿರ್ಲಿಲ್ಲಂತಿರೀ ಕಳ್ಳ ಬರೀಕೈಯಲ್ಲಿ ಹೋದಂತ್ರೀ. ಹೇಳಿ ಊರಿಡಿ ಪ್ರಚಾರ ಆವುತ್ತಿತ್ತು. ಇದರ ಜಾನ್ಸಿಯೇ ಎನಗೆ ದುಃಖ ತಡವಲೆ ಎಡಿಯದ್ದು ಪಿಸುರು ಎಳಗಿದ್ದು." ಇವು ಹೆರ ಹೋದವು ಒಳ ಬರಲಿ ಒಂದಿಷ್ಟು ಲಡಾಯಿ ಕೊಟ್ಟೇ, ಇಂದ್ರಾಣ ಕೂಳು ಕಾಣ್ಸುದು' ಹೇಳಿ ನಿಶ್ಚಯ ಮಾಡಿದೆ. ಆನು ಒಲೆ ಹೊತ್ತುಸಲೆ ಹೋಯಿದೇ ಇಲ್ಲೆ. ಇವು ಎಲ್ಲಿಗೆ ಹೋದರೂ ಒಂದು ಲೋಟ ಕಾಫಿ ಕುಡಿಯವು, ಉಣ್ಣೇಕಾದರೆ ಮನೆಗೆ ಬಕ್ಕು "ಬರೇ ಹೆಜ್ಜೆ, ಉಪ್ಪಿನಕಾಯಿ ಸಾಕು ಬೇಯಿಸಿ ಹಾಕು" ಹೇಳುಗು. ಅವು ಹೆರ ಹೋಪಾಗ ಹೇಳದ್ದೆ ಹೋಪ ಕ್ರಮವೂ ಇತ್ತು. ಹಾಂಗಾಗಿ ಇಂದೂ ಹಾಂಗೇ ಹೋದಿಕ್ಕು ಹೇಳಿ ಜಾನ್ಸಿ, ಅವರ ದಾರಿ ಕಾದುಗೊಂಡೇ ಇತ್ತಿದ್ದೆ.

ಅಂದು ಎಂಗಳ ಆಸ್ಪತ್ರೆಗೆ ವಾಂತಿ, ಭೇದಿ ಹೇಳಿ ಒಂದು ಜೌವನಿಗನ ಕರಕ್ಕೊಂಡು ಅದರ ಅಬ್ಬೆ ಅಪ್ಪ ಕರಕ್ಕೊಂಡು ಬಂದಿತ್ತಿದ್ದವು. ಅವರ ಊರು ಹತ್ರಾಣದ್ದು 'ದಂಡೋತಿ' ಹೇಳಿ. ಅಪ್ಪಂಗೆ ಸುಮಾರು ಎಪ್ಪತ್ತು ವರ್ಷ ಪ್ರಾಯ ಅಕ್ಕು, ಅಬ್ಬಗೂ ಅರ್ವತ್ತು ದಾಂಟಿಕ್ಕು "ಯಪ್ಪಾ, ನಾವು ಬಡವರ್‍ರೀ, ನಮ್ಮ ಮಗಾನಾ ಉಳಿಸಿ ಕೊಡ್ರಿ, – ಎಲ್ಲಾ ಸತ್ತು ಇದೊಂದೇ ಉಳುದಾದ್ರಿ, ನಿಮ್ಮ ಕಾಲು ಬೀಳ್ತೇವ್ರಿ" ಹೇಳಿ ಕಣ್ಣೀರು ಹಾಕಿದವು. ಆದರೆ ಆ ರೋಗಿಗೆ ಅಂಬಗಳೇ ಬೋಧ

ಇತ್ತಿಲ್ಲೆ' ಅಷ್ಟೂ ನಿತ್ರಾಣ ಇತ್ತು "ಭರವಸೆ ಇಲ್ಲ ನೋಡಪ್ಪಾ. ಎಲ್ಯಾದರೂ ಬೇರೆ ದೊಡ್ಡ ಆಸ್ಪತ್ರೆಗೆ ಕರಕ್ಕೊಂಡು ಹೋಗೋದಿದ್ರೆ ಹೋಗಿ" ಹೇಳಿದವು.

"ಎಲ್ಲಿ ಹೋಗ್ಲಿ ಸಾಬ್ರೆ. ಕಯ್ಯಾಗ ದಾಮು ಇಲ್ರಿ, ಬರೇ ಇಪ್ಪತ್ತು ರೂಪಾಯಿ ತಂದೀವ್ರಿ. ದುಡುದು ತರೋ ಮಗನೇ ಬಿದ್ದಾನ್ರಿ. ಏನಾರ ಮಾಡ್ರಿ ಹೇಳಿ ಆ ಇಪ್ಪತ್ತು ರೂಪಾಯಿ ಕೊಟ್ಟು ಅಡ್ಡ ಬಿದ್ದತ್ತು.

ವಾಂತಿ ಭೇದಿ ಆಗಿ ರೋಗಿಯ ಕಣ್ಣು ಗುಳಿ ಬಿದ್ದಿದು. ಅದಕ್ಕದು "ಐಜ' ಕಾಯಿಲೆ"

"ನಿನ್ನ ಮಗ ಬದುಕುತ್ತಾನ ಎಂಬ ಭರವಸೆ ಇಲ್ಲ. ನಮ್ಮ ಕೈಲಾದಷ್ಟು ಮಾಡುತ್ತೇವೆ. ಹೇಳಿ ಇದ್ದದರ ಇದ್ದ ಹಾಂಗೇ ಹೇಳಿದೆಯೊ.

"ಸಾಬ್ರೇ ನಮಗಿರೋದು ಇದೊಂದೇ ಮಗ. ನಾವು ಕೂಲಿನಾಲಿ ಮಾಡಿ ಬದುಕುತ್ತೇವ್ರಿ. ಕಯ್ಯಲ್ಲಿ ಕಾಸಿಲ್ದೆ ಹೋದರೆ ಎಲ್ಲಾ ದವಾಖಾನೆಯವರೂ ಹೊರಗೆ ದಬ್ಬುತ್ತಾರೀ. ನೀವೇ ಏನಾರ ಮಾಡಿ ನನ್ನ ಮಗನ ಬದುಕ್ಸಿ ಕೊಡ್ರಿ" ಹೇಳಿ ಕಣ್ಣೀರು ಹಾಕಿದವು.

"ನೋಡಪ್ಪಾ ನಾವು ಮಾಡುವ ಪ್ರಯತ್ನ ಮಾಡ್ತೇವೆ"

"ಅಷ್ಟು ಮಾಡ್ರಿ ಸಾಬ್ರೆ. ನಮ್ಮ ನಶೀಬಿದ್ರೆ ಉಳಿತಾನ್ರಿ" ಹೇಳಿದವು.

ಅದಕ್ಕೆ ಹತ್ತು ಹನ್ನೆರಡು ಗ್ಲೂಕೋಸ್ ನೀರಿನ ಬಾಟ್ಲಿಗಳ ರಕ್ತನಾಳದ ಮೂಲಕ ಕೊಟ್ಟಾತು, ಉಪ್ಪು ನೀರಿನ ಬಾಟ್ಲಿಗಳನ್ನೂ ಕೊಟ್ಟಾತು. ಇರುಳಿಡೀ ಒರಕ್ಕು ಬಿಟ್ಟು ಆರೈಕೆ ಮಾಡಿ ಆತು. ಆದರೆ ಮನುಗಿದ ಹಾಸಿಗೆಲೇ ನೀರು ನೀರಾಗಿ ಉರ್ಚುದೂ, ಕಾರೂದೂ ಮಾಡಿ ಉದಿ ಆಯೇಕಾರೆ ಮದಲೇ ಪ್ರಾಣವೂ ಬಿಟ್ಟಿತು. ಎಂಗೊ ಮಾಡಿದ ಪ್ರಯತ್ನಂಗೊ ವ್ಯರ್ಥ ಆತು. ಅದರ ಅಬ್ಬೆ ಅಪ್ಪನ ಗೋಳಿನ ನೋಡ್ಳೆ ಎಡಿಯ. ಇಬ್ರೂ ಹಣ್ಣಿದ ಮುದುಕಂಗೊ. ದುಡುದು ತಿಂಬ ತ್ರಾಣ ಇಲ್ಲದ್ದವು.

ಮೂರು ನಾಲ್ಕು ಮಕ್ಕೊ ಹುಟ್ಟಿ ಉಳುದ್ದು ಇದೊಂದೇ ಮಗ.

ಇಪ್ಪತ್ತೈದು ವರ್ಷದ ಗಟ್ಟಿ ಮುಟ್ಟಾದ ಆಳು. ಅದೂ ಇಲ್ಲದ್ದಾತು ಅವಕ್ಕೆ. ತಲೆ ತಲೆ ಬುಡುಕ್ಕೊಂಡು ಕೂಗಲೆ ಸುರು ಮಾಡಿದವು.

"ಇನ್ನು ಅತ್ತು ಕರೆದು ಮಾಡಿಕೊಂಡು ಕೂತುಕೊಳ್ಳಬೇಡಿ. ಆದಷ್ಟು ಬೇಗ ಹೆಣವನ್ನು ತೆಗೆದುಕೊಂಡು ಊರಿಗೆ ಹೋಗ್ರಿ" ಹೇಳಿದವು ಎನ್ನ ಮನೆವು.

"ಆಯಿತು ಸಾಬ್ರೆ, ಊರೊಳಗಿಂದ ಬಂಡಿ ತೆಕ್ಕೊಂಡು ಬರ್ತೇನ್ರಿ ಹೇಳಿ ಅದರ ಅಪ್ಪ ಹೆರಹೋತು. ಅರ್ಧ ಗಂಟೆ ಆಯೇಕಾರೆ ಅಪ್ಪ ವಾಪಾಸು ಬಂತು" ಆದರೆ ಆರೂ ಬಂಡಿ (ಎತ್ತಿನಗಾಡಿ) ಕೊಡ್ಳೆ ತಯಾರಿತ್ತಿದ್ದವಿಲ್ಲ. ಹಾಂಗಾಗಿ ಅಪ್ಪನೇ ಮಗನ ತಲೆ ಹಿಡಕ್ಕೊಂಡು, ಅಬ್ಬೆಯ ಹತ್ರೆ ಕಾಲು ಹಿಡುಕ್ಕೊಂಬಲೆ ಹೇಳಿತ್ತು. ಇಬ್ರೂ ಹೆಣವ ಹೊತ್ತೊಂಡು ಊರಿಂಗೆ ಹೋಪಲೆ ತಾಯಾರಾದವು. ಇದರ ಕಂಡು ಎನ್ನ ಮನೆಯವಕ್ಕೆ ಬೇಜಾರಾತು. ಕೂಡ್ಳೆ ಗೇರೇಜಿಲಿದ್ದ ಕಾರಿನ ಹೆರತಂದು ಬಾಗಿಲು ತೆಗದು ಹೆಣವ ಎತ್ತಲೆ ಸಹಾಯ ಮಾಡಿ, ಅವರಿಬ್ಬರನ್ನೂ ಕೂರ್ಸೊಂಡು ದಂಡೋತಿವರೆಗೆ ಹೋಗಿ ಮನೆ ಒಳಂಗೆ ಕರಕ್ಕೊಂಡು ಹೋಗಿ ಮನುಶಿಕ್ಕಾದವು. ಅಲ್ಲಿ ಐದಾರು ಜೆನಂಗೊ ನೋಡ್ಳೆ ಹೇಳಿ ಬಂದರೂ ಆರೂ ಅದರ ನೆಗ್ಗಿ ಮಣ್ಣು ಮಾಡ್ಳೆ ತಯಾರಿತ್ತಿದ್ದವಿಲ್ಲೆಡ "ಹೈಜ ಆಗಿ ಸತ್ತಾನ ನಾವು ಮುಟ್ಸಿಕೊಳ್ಳಾಂಗಿಲ್ಲ" ಹೇಳಿದವಾಡ.

"ಕುಣಿ ತೋಡ್ರಿ, ನಾನೇ ಎತ್ತಿಹಾಕ್ತೇನೆ" ಹೇಳಿ ಇವು ಹೇಳಿ ಹೆಣವ ಹೊಂಡಕ್ಕೆ ಹಾಕಿ ಮಣ್ಣು ಮುಚ್ಚಿ ಬಂದವಾಡ. ಇಷ್ಟಪ್ಪಾಗ ಮಧ್ಯಾಹ್ನ ಎರಡು ಗಂಟೆ ಆಯಿದು. ಇಷ್ಟೆಲ್ಲಾ ಸಂಗತಿ ನೆಡದ್ದು ಎನಗೆ ಗೊಂತೇ ಇತ್ತಿಲ್ಲೆ.

ಆನು ಏಳೇಕಾರೆ ಮದಲೇ ಅವು ಹೋಗಿ ಆಯಿದು. ಎಲ್ಯಾದರೂ ರೋಗಿಯ ನೋಡ್ಳೆ ಹೋದಿಕ್ಕು ಹೇಳಿ ಜಾನ್ಸಿದೆ. ಗೊಂತಿದ್ದರೆ ಖಂಡಿತಾ ಅವರ ಉಪಾಸ ಹಾಕುತ್ತಿತ್ತಿಲ್ಲೆ.

ಮನೆಗೆ ಎತ್ತಿದ ಕೂಡ್ಳೇ ಮಿಂದಿಕ್ಕಿ ಬಂದವು.

"ಉಂಬಲೆ ಆತೋ, ಬೇಗ ಬಳುಸು. ಎನಗೆ ತುಂಬಾ ಹಶು ಆವುತ್ತು" ಹೇಳಿದವು.

"ಇಂದು ಆನು ಅಡಿಗೆಯೇ ಮಾಡಿದ್ದಿಲ್ಲೆ" ಹೇಳಿದೆ.

"ಎಂತ ಪೇಶೆಂಟುಗೊ ಹೆಚ್ಚಿದ್ದಿದ್ದವೋ" ಕೇಳಿದವು.

"ಒಂದಿಷ್ಟು ಅವಲಕ್ಕಿಯ ಚೆಂಡಿಮಾಡಿ ಮಸರು, ಉಪ್ಪಿನಕಾಯಿ ಹಾಕಿ ಕೊಡು" ಹೇಳಿದವು.

"ಅದನ್ನೂ ಮಾಡಿಕೊಡೆ" ಹೇಳಿದೆ. ಅಂಬಾಗಳೇ ಅವಕ್ಕೆ ಎನಗೆಂತದೋ ಪಿಸುರು ಎಳಗಿದ್ದು ಹೇಳಿ ಅರ್ಥ ಆದ್ದು.

"ಹೂಂ ಎಂತ ಮೋರೆ ಕುಂಬಳಕಾಯಿ ಹಾಂಗೆ ಆಯಿದು ಎಂತ ಸಂಗತಿ" ಹೇಳಿ ಕೇಳಿದವು.

ಅಂಬಾಗಳೇ ಎನ್ನ ದುಃಖ ಕಟ್ಟೆ ಒಡದ್ದು. ಕಣ್ಣಿಂದ ನೀರು ಸುರಿವಲೆ ಸುರುವಾತು.

"ಮರುಗೋಳು ಗೌಡನ ಮನೇಲಿ ಎರಡು ಸೇರು ಬಂಗಾರ ಕುಳುವಾಯಿದಾಡ" ಹೇಳಿದೆ.

"ಅದಕ್ಕೆ ನಿನಗೆಂತ 'ಸೂತಕ' ಹೊಟ್ಟೆ ಬಟ್ಟೆ ಕಟ್ಟಿ ಬಂಗಾರ ಜಮಾ ಮಾಡಿಕ್ಕು. ಗಂಟೆತ್ಯೊಂಡು ಕಳ್ಳರು ಹೋದಿಕ್ಕು. ಅದಕ್ಕೆ ನೀನೆಂತಕೆ ಹೀಂಗೆ ಕೂಗುತ್ತೆ? ಎಂತ ನಿನ್ನ ಮನೆಗೆ ಕಳ್ಳರು ಹೊಕ್ಕಿದವೋ?"

"ಹೊಗವು ಹೇಳಿ ಹೇಂಗೆ ಹೇಳುದು? ಕಳ್ಳರು ಹೊಕ್ಕರೆ ನಮ್ಮ ಗತಿ ಎಂತಕ್ಕುಹೇಳಿ ಆಲೋಚನೆ ಆದರೂ ಮಾಡಿದ್ದೀರೋ ನಿಂಗೊ?

"ಎಂತದೂ ಸಿಕ್ಕದ್ದೆ ಕಳ್ಳರು ವಾಪಾಸು ಹೋಕು. ನಮಗೆಂತ ಹೆದರಿಕೆ? ನಮ್ಮಲ್ಲಿ ಬಂಗಾರ ಬೆಳ್ಳಿ ಇದ್ದರಲ್ಲದೋ ದೋಚಲೆ? ಅದಕ್ಕಾದ ನಿನಗೆ ಅಂಬಾಗಂಬಾಗ ಹೇಳುದು ಬಂಗಾರದ ಶುದ್ಧಿ ಎತ್ತೇಡ ಹೇಳಿ" ಅವರು ಮಾಮೂಲಿ ಭಾಷಣ ಸುರು ಮಾಡಿದವು.

ಎನ್ನ ಪಿಸುರು ನೆತ್ತಿಗೆ ಏರಿತ್ತು.

"ಇಷ್ಟ್ರವರೆಗೆ ಆನು ನಿಂಗಲ ಮಾತಿಂಗೆ ಎದುರಾಡಿದ್ದಿಲ್ಲೆ. ಆದರೆ ಇಂದು ಇತ್ಯರ್ಥ ಆಗಲೇಬೇಕು. ನಾವು ಹೀಂಗೇ ಕಂದಾರಿಗಳ ಹಾಂಗೆ ಇಪ್ಪದೋ. ಅಲ್ಲಾ ಮುಂದಣ ಆಲೋಚನೆ ರಜಾದರೂ ಮಾಡ್ಳಿದ್ದೊ ಹೇಳಿ. ಹೀಂಗೆ ಇದ್ದರೆ ನಮ್ಮ ಇಬ್ರು ಮಕ್ಕಳ ಭವಿಷ್ಯ ಎಂತಕ್ಕು? ರಜಾದರೂ ಆಲೋಚನೆ ಮಾಡಿದ್ದಿರೋ? ಹೀಂಗೆ ಇಪ್ಪದಾದರೆ ಆನು ನಾಳೆಂದ ಆಸ್ಪತ್ರೆಯ ಕೆಲಸ ಮಾಡುತ್ತಿಲ್ಲೆ. ಮನೇಲಿಯೇ ಇದ್ದದ ಬೇಶ್ಯೊಂಡು ಕೂರ್ತೆ" ಹೇಳಿ ಬೆಶಿ ಮುಟ್ಟುಸಿದೆ.

"ಈಗ ಆನೆಂತ ಮಾಡೇಕು? ಅದಾದರೂ ಹೇಳು? ಅದರ ಮಾಡಿದರೆ ಆತನ್ನೆ! ಸುಮ್ಮನೇ ಮಾತು ಸೇರ್ಸುದೆಂತಕೆ?

"ಒಂದು ವಾರಂದೊಳ ಹತ್ತು ತೊಲ ಬಂಗಾರವ ಕರೀದಿ ಮಾಡಿ ಮನೇಲಿ ಮಡುಗೇಕು" ಅಪ್ಪಣೆ ಕೊಟ್ಟೆ.

"ಎಂದೂ ಇಲ್ಲದ್ದ ಬಂಗಾರದ ಮರುಳು ಇಂದೆಲ್ಲಿ ಬಂತು ನಿನಗೆ!"

ಅವಕ್ಕೆ ಆಶ್ಚರ್ಯ ಆತು.

"ಎನಗೆ ಬೇಕು ಹೇಳಿರೆ ಬೇಕು"

"ಎಂತಕೆ ಹೇಳಿ ಆದರೂ ಹೇಳು"

"ಅಪ್ಪಿತಪ್ಪಿ ಕಳ್ಳಂಗೊ ನಮ್ಮ ಮನೆಗೆ ಹೊಕ್ಕರೆ ಅಷ್ಟಾದರೂ ಹೊತ್ತಂಡು ಹೋಗಲಿ. ಊರವರ ಬಾಯಿಲಿ ಅಷ್ಟು ಇತ್ತು ನಮ್ಮಲ್ಲಿ ಹೇಳಿ ಆದರೂ ಗೊಂತಾಗಲಿ."

ಇಷ್ಟಾನು ಹೇಳಿದ್ದೆ ತಡ ಅವರ ಹಶು ಮರದೇ ಹೋತು

'ಕಿಸುಕ್' ಹೇಳಿ ನೆಗೆ ಮಾಡ್ಲೆ ಸುರು ಮಾಡಿದವು.

"ಅಲ್ಲಾ ಪೆದ್ದು ಸಂಕಾರಿ, ಕಳ್ಳರಿಂಗೆ ಕೊಂಡು ಹೋಪಲೆ ಹೇಳಿ ಆರಾದರೂ ಬಂಗಾರವ ಖರೀದಿ ಮಾಡಿ ಮಡುಗ್ಗೊ?"

"ಅಪ್ಪು, ಅಷ್ಟಾದರೂ ಬಂಗಾರ ಮನೇಲಿ ಇರೇಕು. ಬಂದ ಕಳ್ಳರು ಬರಿ ಕೈಲಿ ಹೋಪಲಾಗ. ಅದು ನವಗೆ ಅವಮಾನ."

"ಬೆಪ್ಪು ತಕ್ಕಡಿ ಕಳ್ಳಂಗೆ ನಮ್ಮ ಮನೇಲಿ ಏನೂ ಸಿಕ್ಕಿದ್ದಿಲ್ಲೆ ಹೇಳಿರೆ ನವಗೆ ಅವಮಾನ ಅಲ್ಲ ಅಭಿಮಾನ"

"ಅಪ್ಪು. ಊರಿಡೀ ಗತಿ ಇಲ್ಲದ್ದವು ಹೇಳಿ ಡಂಗುರ ಅಕ್ಕು"

"ನವಗೆ ದಿನಕ್ಕೆ ರೋಗಿಗೊ ಎಷ್ಟು ಬತ್ತವು ಹೆಳಿ ಎಲ್ಲೋರಿಂಗೂ ಗೊಂತಿದ್ದು. ಎಷ್ಟು ಪೈಸೆ ಬತ್ತು ಹೇಳಿಯೂ ಗೊಂತಿದ್ದು. ನಾವೆಂತದೂ ಅಡಾವುಡಿ ಖರ್ಚು ಮಾಡುತ್ತಿಲ್ಲೆ ಹೇಳಿಯೂ ಗೊಂತಿದ್ದು; ಅದಕ್ಕಾಗಿ ನವಗೆ ಊರಿಲ್ಲಿ ಎಷ್ಟು ಗೌರವ ಕೊಡುತ್ತವು ಹೇಳಿ ನಿನಗೆ ಗೊಂತಿದ್ದು. ಆರ ಮನೇಲಿ ಮದುವೆ ಮುಂಜಿ, ನಿಶ್ಚಿತಾರ್ಥ ಕಾರ್ಯಕ್ರಮ ಇದ್ದರೂ ನಮ್ಮ ದಿನಿಗೇಳಿ, ಉಡುಗೊರೆ ಕೊಟ್ಟು ಕಳುಸುತ್ತವು. ಹಬ್ಬ ಹರಿದಿನಕ್ಕೆ ಅವರಲ್ಲಿ ಮಾಡಿದ ಹೋಳಿಗೆ ಕೊಟ್ಟು ಕಳುಸುತ್ತವು. ಹೊಸ ಬೆಳೆ ಜೋಳದ 'ಸಿಂತೆಸಿ', ಹಸಿಕಡ್ಲೆ, ತೊಗರಿಕಾಯಿ ತಂದು ರಾಶಿ ಹಾಕುತ್ತವು. ಇದರಿಂದ ಹೆಚ್ಚು ನವಗೆಂತ ಬೇಕು ಹೇಳು."

"ಎನಗೆ ಚಿನ್ನ ಹಾಕೇಕು ಹೇಳಿ ಆನು ಹೇಳಿದ್ದಲ್ಲ. ಎಲ್ಯಾದರೂ ಕಳ್ಳರು ನಮ್ಮ ಮನೆಗೆ ಬಂದರೆ ಎಂತರ ತೆಕ್ಕೊಂಡು ಹೋಕು ಹೇಳಿಯೇ ಚಿಂತೆ ಅಷ್ಟೆ" ಎನ್ನ ಪಿಸುರು ರಜಾ ಇಳುಕ್ಕೊಂಡು ಬಂತು.

ಇವು ಹೇಳಿದ್ದಲ್ಲಿ ಸತ್ಯಾಂಶ ಇಲ್ಲದ್ದಿಲ್ಲೆ. ಅಲ್ಯಾಣವು ಎಂಗಳ ದಿನಿಗೇಳುದೇ 'ಅವ್ವಾ, ಅಪ್ಪಾ' ಹೇಳಿ. ಅವರ ಕಷ್ಟ ಸುಖಂಗಳ, ಮನೆಯ ಆಗು ಹೋಗುಗಳ, ಎಂಗಳ ಮುಂದೆ ಮನಸ್ಸು ಬಿಚ್ಚಿ ಹೇಳುಗು. ಎಂಗಳ ಅವರ ಬಂಧುಗಳ ಹಾಂಗೇ ನೋಡುತ್ತವು.

"ಇಷ್ಟಕ್ಕೂ ನಮ್ಮ ಮನೆಗೆ ಕಳ್ಳರು ನುಗ್ಗುದಾದರೂ ಹೇಂಗೆ? ನಮ್ಮ ಮನೆ ಇಪ್ಪದ್ದು ಆಸ್ಪತ್ರೆಯ ಮೇಗಾಣ ಉಪ್ಪರಿಗೇಲಿ. ಹೆರಾಂದ ಕಬ್ಬಿಣದ ಸರಳಿದ್ದ ಬಾಗಿಲು. ಒಳಾಂದ ಮರದ ಬಾಗಿಲು. ಆಸ್ಪತ್ರೆಲಿಯೋ ಇಪ್ಪತನಾಲ್ಕು ಗಂಟೆಯೂ ರೋಗಿಗೊ ಇರ್ತವು. ಇರುಳಿಡೀ ಲೈಟು ಹಾಕುತ್ತು. ಇರುಳು ಕಾವಲಿಂಗೆ ಹೇಳಿ ಸಿದ್ದಪ್ಪ ಇರ್ತು. ಮತ್ತೆ ಕಳ್ಳರು ಮನೆ ಒಳ ಬಪ್ಪದಾದರೂ ಹೇಂಗೆ ಆಲೋಚನೆ ಮಾಡು."

"ಇಷ್ಟಕ್ಕೂ ನಿನಗೆ ಬಂಗಾರ ಬೇಕೇಬೇಕು ಹೇಳಿ ಆಶೆ ಇದ್ದರೆ ಹೇಳು. ಆನು ಜರ್ಮನಿಗೆ ಕಲಿವಲೆ ಹೋಪಾಗ ತೆಕ್ಕೊಂಡ ಸಾಲ ಎಲ್ಲಾ ಮುಗುತ್ತು. ಇಗ ಒಂದು ಇಪ್ಪತ್ತು ಸಾವಿರ ಸಾಲ ಬೇಕಾದರೆ ಕೊಡುಗು. ಅದರಲ್ಲಿ ನಿನಗೆ ಬೇಕಾದ ಒಡವೆಗಳ ಮಾಡ್ಸಿಗೊ" ಹೇಳಿದುವು.

ಕೂಡ್ಲೆ ಎದ್ದಿಕ್ಕಿ ಒಳಹೋಗಿ, ಅವಲಕ್ಕಿಗೆ ಮೊಸರು ಹಾಕಿಕೊಟ್ಟೆ. ಹಾಂಗೆ ಒಂದು ಲೋಟ ಬೆಶಿ ಕಾಫಿಯನ್ನೂ ಮಾಡಿಕೊಟ್ಟೆ, ಅದರ ಮುಗುಶಿ ಮತ್ತೆ ಅವಕ್ಕೆ ಹೊಟ್ಟೆ ತಣ್ಣಂಗೆ ಆತು. ಎನ್ನ ಕೋಪವೂ ಕರಗಿ ಹೋತು.

ಆನೊಂದು ಡಾಕ್ಟ್ರಾಗಿ ಇವರ ಪೀಡಿಸಿದೆನೇ ಹೇಳುವ ಪಶ್ಚಾತ್ತಾಪವೂ ಆತು.

"ಈಗ ಹೇಳು ಕಳ್ಳಂಗೊ ಬಂದರೆ ಎಂತ ಮಾಡುತ್ತೆ. ಅವರ ಬರಿ ಕೈಲಿ ಕಳುಸುತ್ತಿಯೋ" ಹೇಳಿ ತಮಾಷೆ ಮಾಡಿದವು.



## ರಾಮತೀರ್ಥದ ರಾಚಪ್ಪನ ರಾದ್ಧಾಂತ

ಇದು ನಡದ್ದು ಎಂಗೊ ಗುಲ್ಬರ್ಗಾ ಜಿಲ್ಲೆಯ ಚಿತಾಪುರ ಹೇಳುವ ತಾಲೂಕಿಲ್ಲಿ ಆಸ್ಪತ್ರೆ ತೆಗೆದು ಹತ್ತು ವರ್ಷ ನಡೆಯಿಸಿಪ್ಪಾಗ ಚಿತಾಪುರ ಆಗ ಒಂದು ಕುಗ್ರಾಮ ಆಗಿತ್ತು. ಅಲ್ಲಿ ಕುಡಿವಲೆ ನೀರಿಲ್ಲೆ. ವಿದ್ಯುದೀಪದ ಏತ್ತೆಯೂ ಇತ್ತಿಲ್ಲೆ. ನೀರು ಬೇಕಾದರೆ ಬಂಡಿ (ಎತ್ತಿನಗಾಡಿ) ಲಿ ತರುಸೇಕು. ದಿನಕ್ಕೆ ಮೂರು ರೂಪಾಯಿ ಕೊಟ್ಟರೆ ಹದಿನೈದು ಕೊಡಪ್ಪಾನ ನೀರು ಸಿಕ್ಕುಗು. ಅದರಲ್ಲಿ ಎಲ್ಲಾ ಆಯೇಕು ಎಂಗೊ ಬಪ್ಪಾಗ ಇಲ್ಲಿ ಹೇಳಿಗೊಂಬ ಡಾಕ್ಟರಕ್ಕೊ ಆರೂ ಇತ್ತಿದ್ದವಿಲ್ಲೆ.

ಉದಿಯಪ್ಪಾಗ ಒಂದು ಬಸ್ಸು ಗುಲ್ಬರ್ಗಂದ ಬಂದರೆ ಕಸ್ತಲಪ್ಪಾಗ ಅದೇ ಬಸ್ಸು ವಾಪಸು ಹೋಪದು. ಇಲ್ಲಿಯ ಜೆನಂಗೊ ಅತ್ಲಾಗಿ ಇತ್ಲಾಗಿ ಹೋಯೇಕಾದರ ಎತ್ತಿನ ಬಂಡಿ, ಕುದುರೆ, ಕತ್ತೆ, ಕಾಲ್ನಡಿಗೆ ಇಷ್ಟೇ ಅನುಕೂಲ ಇಪ್ಪದು. 'ಎಂತಕಪ್ಪ ಬಂದು ಬಿದ್ದೆ ಈ ಹಾಳೂರಿಂಗೆ. ಇಲ್ಲಿಂದ ಎದ್ದಿಕ್ಕಿ ಹೇಂಗಪ್ಪಾ ಹೋಪದು ಹೇಳುವ ಚಿಂತೆ ಸುರುವಾತು' ಇದ್ದ ಪೈಸೆ ಎಲ್ಲಾ ಅದು ಇದು ಹೇಳಿ ಕರ್ಚು ಮಾಡಿಯೂ ಆಯಿದು. ಅಷ್ಟಾದರೂ ಹುಟ್ಟುಸಿ ಇಲ್ಲಿಂದ ಕಾಲು ತೆಗೇಕಷ್ಟೆ! ಎಂಗಳ ಪರಿಸ್ಥಿತಿ ಹಾಂಗಾಯಿದು.

ಆದರೆ ಎಂಗೊ ತಾನ್ನಿದಷ್ಟು ಪಡುಪೋಶಿ ಜಾಗೆ, ಜೆನ ಅದಾಕಾತ್ತಿಲ್ಲೆ. ಆಸ್ಪತ್ರೆ ಸುರುವಾಗಿ ಒಂದೇ ತಿಂಗಳಿಂಗೆ ಸುತ್ತುಮುತ್ತಾಣ ಹತ್ತು ಹಳ್ಳಿಂದ ಹಿಂಡು ಹಿಂಡಾಗಿ ರೋಗಿಗೊ ಬಪ್ಪಲೆ ಸುರು ಮಾಡಿದವು. ಎಷ್ಟು ಕಮ್ಮಿ ಹೇಳಿರೂ ಐವತ್ತು ಜೆನ ಆದರೂ ಬಕ್ಕು. ಹಳ್ಳಿಂದ ಬಪ್ಪಾಗಳೇ ಅವು ಒಣಗಿದ ಜೋಳದ ರೊಟ್ಟಿ, ನೆಲಕಟ್ಟೆ ಚಟ್ನಿ, ಹಸಿ ನೀರುಳ್ಳಿ, ಹಸಿಮೆಣಸು ಕಟ್ಟೊಂಡೇ ಬಕ್ಕು. ನಾಲ್ಕು ದಿನ ಆಸ್ಪತ್ರೆಲಿ ತೋರ್ಸೊಂಡು ಇಂಜೆಕ್ಷನ್, ಮದ್ದು ತೆಕ್ಕೊಂಡು, ಇರುಳಪ್ಪಾಗ ಯಾವುದಾದರೂ ಅಂಗಡಿಯ ಹೆರ ಜಾಲಿಲ್ಲಿ ಮನುಗಿ ಹೋಕು. ಅವಕ್ಕೆ ದಿನಕ್ಕೆ ಇಷ್ಟು ಚಾರ್ಜು ಹೇಳಿರೆ ಆಗ "ಯವ್ವಾ - ದಿನದಿನ ಕಾಸೆಲ್ಲಿಂದ ತರಾವ? ಗುತ್ತನೇ ಹೇಳಿಬಿಡ್ರಿ. ಇಲ್ಲೇ ಆಡ್ತಿಂದ ಇಸಕೊಂಡು ಕಟ್ತೇವಿ" ಹೇಳುವವೇ ಹೆಚ್ಚು ಜನ. "ಕಾಯಿಲೆ ವಾಸಿ ಮಾಡ್ಳಾಕೆ ಏಸು ದಿನ ಬೇಕು; ಅಷ್ಟು ದಿನ ಇರ್ತೇವಿ" ಹೇಳಿಡ್ತವು. "ನಾಲ್ಕು ದಿವಸ ಇರಬೇಕು. ಐವತ್ತು ರೂಪಾಯಿ ಆಗುತ್ತದೆ" ಹೇಳಿರೆ ಸೊಲ್ಲೆತ್ತದೆ ಪೈಸೆ ತೆಕ್ಕೊಂಡು ಬಂದು ಕೊಟ್ಟು ರಶೀದಿ ತೆಕ್ಕೊಳ್ತವು. ಒಂದೇ ದಿನಲ್ಲಿ ರೋಗ ಕಮ್ಮಿ ಆದರೂ ಅವಕ್ಕೆ ನಾಲ್ಕು ದಿನವೂ ಇಂಜೆಕ್ಷನ್ ಔಷಧ ಕೊಡ್ಳೇಬೇಕು ಇದು ಅಲ್ಲಿಯ ಕ್ರಮ. ಬಂದವಕ್ಕೆಲ್ಲಾ ರೋಗ ಬೇಗ ಕಮ್ಮಿ ಆಯ್ಕೊಂಡು ಇದ್ದ ಕಾರಣ, ಆಸ್ಪತ್ರೆಗೆ ದಿನೇ ದಿನೇ ಹೆಚ್ಚೆಚ್ಚು ರೋಗಿಗೊ ನುಗ್ಯೊಂಡು ಇತ್ತಿದ್ದವು.

ಇಲ್ಲ್ಯಾಣ ರೋಗಿಗೋಕೆ ಅವರ ಕರಕ್ಕೊಂಡು ಬಂದವಕ್ಕೆ ಸಮಯದ ಪ್ರಜ್ಞೆ ಹೇಳುದು ಇಲ್ಲಲೇ ಇಲ್ಲೆ. ಎಷ್ಟು ಹೊತ್ತಿಂಗಾದರೂ ಬಂದು "ಯವ್ವಾ, ಯವ್ವಾ" ಹೇಳ್ಳೆ ಸುರು ಮಾಡುಗು.

"ದೊಗರ ಗಾಂವಿಂದ ಬಂದೇವ್ರಿ. ಒಸಿ ನೋಡಿ ಔಸದ, ಇಂಜೆಕ್ಷನ್ ಕೊಡ್ರಿ. ಅಡ್ತಿಗೆ ಮಾಲು ಹಚ್ಚೇವ್ರಿ. ಪೋರಾಗೆ ಬಡಾನೆ ನೋಡಿ ಕಳ್ಸಿರಿ" ಹೇಳಿ ಮನೆ ಮುಂದೆ ಬಂದು ನಿಲ್ಲುತ್ತು ಭಾಗಮ್ಮ. ಅಂಬಾಗಳೇ ಮೂರು ಗಂಟೆ ಆಯಿದು. ಮನಗೆ ಬಂದದಷ್ಟು ಒಂದಿಷ್ಟು ಉಂಡಿಕ್ಕಿ ಹೋಯೇಕು ಹೇಳಿರೆ ಬಿಡ.

"ನಾಲ್ಕು ಗಂಟೆಗೆ ಬಾ ಭಾಗಮ್ಮ. ಆಗ ದವಾಖಾನೆಗೆ ಬರುತ್ತೇನೆ" ಹೇಳಿರೆ

"ಇಲ್ರಿ, ನಾಕಕ್ಕೆ ನಾವು ಬಂಡಿ ವಾಪಾಸು ಹೊಡಿಬೇಕ್ರಿಯವ್ವಾ" ಹೇಳಗು

"ಎನಾಗಿದೆ ಮಗುವಿಗೆ" ಹೇಳಿ ಕೇಳಿದರೆ–

"ನಿನ್ನೆಂದ ಹೊಟ್ಟೆ ಜಾಡ್ಸಲಕ್ಕತ್ತದ್ರಿ. ಒಸಿ ನೋಡಿ ಪುಣ್ಯ ಕಟ್ಟುಕ್ಕೋರಿ ಯವ್ವಾ ಕಾಲು ಬೂಳ್ತೀನಿ" ಹೇಳ್ಳೆ ಸುರು ಮಾಡಿತ್ತು. ಇನ್ನು ರಜಾ ಹೊತ್ತು ಮಾಡಿರೆ ಅದರ ಪೋರ ಮನೆ ಮೆಟ್ಟ ಮೇಗೇ ಉರ್ಚುಗು. ಮತ್ತೆ ಅದನ್ನೂ ಆನು

ಬಳಿಯೇಕಕ್ಕು ಹೇಳಿ ಹೆದರಿ ಕೂಡ್ಯೇ ಅದರ ಮಗಳ ನೋಡಿ ಮದ್ದು ಇಂಜೆಕ್ಷನ್ ಮಾತ್ರೆ ಕೊಟ್ಟು ಸಾಗ ಹಾಕಿದೆ. ಮಕ್ಕೊ ಹೇತರೆ, ಮೂಗು ಸೋರುತ್ತರೆ, ಅವು ಸುತ್ತಿದ ವಸ್ತ್ರಲ್ಲೇ ಒರಸಿ ತೆಗಗು. ಅವಕ್ಕೆ ಅದೊಂದು ದೊಡ್ಡ ವಿಷಯವೇ ಅಲ್ಲ. ಅವು ಕೂದಲ್ಲಿ ಹೋದಲ್ಲಿ ಬಂದಲ್ಲಿ, ನೆಳವು ಹಿಂಡುಕಟ್ಟಿ ಬಕ್ಕು, ವಾಸನೆಲಿ ಕೂಪಲೆಡಿಯ" ಹೋದ ಭಾಗಮ್ಮ ಮತ್ತೆ ಬಂತು.

"ಅವ್ವಾ, ಕುಡಿಲಾಕ ಒಸಿ ನೀರು ಹಾಕವ್ವಾ, ಗಂಟಲು ಒಣಗ್ಯೆತೆ" ಹೇಳಿ ಒಂದು ಎಲುಮಿನಿಯಮ್ ಲೋಟ ತಂದು ಮಡುಗಿತ್ತು. ಅದಕ್ಕೆ ಒಂದು ಚೆಂಬು ನೀರು ತಂದು ಹಾಕಿದೆ.

"ಯವ್ವಾ ಮಗೀಗೆ ಗೋಲಿ ಮುಂದು ತಿನ್ಸಾಲೋ, ಔಷಧನೋ? ಗೋಲಿ ನುಂಗಾಕಿಲ್ಲವ, ಒಸಿ ಪುಡಿ ಮಾಡಿ ಕೊಡ್ರಿ" ಹೇಳಿತ್ತು. ಆತು ಹೇಳಿ ಮಾತ್ರೆಯ ಹೊಡಿ ಮಾಡಿ ಕೊಟ್ಟೆ. ಇದನ್ನು ಸಕ್ಕರೆಯೊಂದಿಗೆ ಕಲಸಿಕೊಡು" ಹೇಳಿಯೂ ಹೇಳಿದೆ.

"ಸಕ್ಕರೆ ಎಲ್ಲಿಂದ ತರ್ಲವ್ವಾ, ಒಸಿ ಇದ್ದರೆ ಕೊಟ್ಟು ಬಿಡಿ. ಇಲ್ಲಿಯೇ ಗಂಟ್ಯೆಗೆ ಆಕಿ ಬುಡುತ್ತೇನೆ" ಹೇಳಿತ್ತು. ಅದನ್ನೂ ಕೊಟ್ಟೆ.

"ಯವ್ವಾ, ನಾಳೆ ಅಮಾಸ್ಯೆ ಬಂತ್ರಿ, ಪೋರಿಗೆ, ಹೋಳಿಗೆ ಕೊಡಬೇಕೋ ಬೇಡ್ವೊ ಹೇಳ್ರಿ. ಪಾಪ ನಾವೆಲ್ಲಾ ತಿನ್ನೋವಾಗ ಮಕಾ ಮಕಾ ನೋಡ್ತದೆ. ಬಿಟ್ಟೇಗೆ ತಿನ್ಲೀರಿ? ಅದಕ್ಕೆ ಕೇಳೀನಿ ಬೇಸರ ಮಾಡ್ಕೊಬೇಡಿ. ನಾವು ಮೋಟಾ ಮಂದಿ ತಿಳಿಯಾಕಿಲ್ಲ" ಹೇಳುತ್ತು ಭಾಗಮ್ಮ. ಎನಗೋ ರಜಾ ಪಿಸುರು ಬಪ್ಪಲೆ ಸುರುವಾತು.

"ಅಮಾವಾಸೆಗೆ ಹೋಳಿಗೆ ಮಾಡದಿದ್ದರೆ ಗಂಟೇನು ಹೋಗುತ್ತದೆ? ಮಗು ಸ್ವಲ್ಪ ಹುಷಾರಾದ ಮೇಲೆ ಹೋಳಿಗೆ ಮಾಡು" ಹೇಳಿದೆ.

"ಅದೇಂಗವ್ವಾ ತಿಂಗಳಿಗೊಂದು ಬರೋ ಅಮಾಸೆಲಿ ಹೋಳಿಗೆ ಮಾಡಿ ದೇವ್ರಿಗೆ ಎಡೆಕೊಡದಿದ್ದರೆ ಹ್ಯಾಂಗೆ? ಸಿವಾ ಮೆಚ್ಚುತ್ತಾನೋ?"

"ಆಯಿತು. ಒಂದು ಚೂರು ಕೊಡು. ಹೊಟ್ಟೆ ತುಂಬಾ ತಿನ್ನಿಸಬೇಡ" ಹೇಳಿ ಭಾಗಮ್ಮನ ಕಳುಸಿದೆ. ಇಷ್ಟೆಲ್ಲಾ ಅಪ್ಪಾಗ ಕಸ್ತಲಾತು. ಇನ್ನು ಆಸ್ಪತ್ರೆಗೆ ಹೋಪಲೆಡಿಯ ಹೇಳಿ ಒಂದು ಮುಷ್ಟಿ ಅಶನ ತಿಂದು ಮನೆಲಿ ಮನುಗಿದೆ.

ಹೀಂಗಿಪ್ಪ ಪ್ರಕರಣಂಗೊ ಆಸ್ಪತ್ರೆ ತೆರದ ದಿನಂದ ಕೊನೆವರಗೂ ನಡಕ್ಕೊಂಡೇ ಇತ್ತು. ಎನ್ನ ಯಜಮಾನರೂ ಡಾಕ್ಟ್ರೇ, ಅವು ರೋಗಿಗಳ ಸಲಿಗೆಗೆ ಸಿಕ್ಕವು. ಪರೀಕ್ಷೆ ಮಾಡಿ ಮದ್ದು ಕೊಟ್ಟರೆ ಆತು. ಮತ್ತೆ ಅವರ ಶುದ್ಧಿಗೆ ಬಾರವು.

"ಯವ್ವಾ, ಪೈಲೆ ಔಸುದ್ಯ ಕುಡಿಸಲೋ, ಗೋಲಿನೋ ಹೇಳಿ ಕೇಳಿದರೆ" ನಿನಗೆ ಆಗಲೇ ಎಲ್ಲಾ ಹೇಳಿದ್ದೇನೆ. ಸ್ವಲ್ಪ ಕಿವಿಗೊಟ್ಟು ಕೇಳಲಿಕ್ಕೆ ಏನಾಗಿತ್ತು ಧಾಡಿ ಹೇಳಿ ರಜಾ ಧನಿ ಏರ್ಸಿಯೇ ಹೇಳುಗು" ಸೆಟಕೋ ಬೇಡ್ರಿಯಪ್ಪಾ ನಾವು ಮೋಟಾ ಮಂದಿ ಜಲ್ದಿ ತಿಳಿಯಾಂಗಿಲ್ರಿ" ಹೇಳಿರೆ, 'ಸೀದಾ ಹೋಗಿ ನರ್ಸಮ್ಮನಿಗೆ ಕೇಳು" ಹೇಳಿ ಅಲ್ಲಿಂದ ಕಳ್ಸುಗು' ಹಾಂಗಾಗಿ ಹೆಚ್ಚಿನವು ಅವರ ಹತ್ರಂಗೆ ಹೋಗವು.

"ಯಪ್ಪಾ, ಅವ್ವಾವ್ರು ಇಲ್ಲೇನಪ್ಪಾ" ಹೇಳಿ ಕೇಳಿಗೊಂಡೇ ಬಕ್ಕು" ಇದ್ದಾರೆ ಒಳಗೆ ನಡಿ" ಹೇಳಿ ಕಳ್ಸುಗು ಹೀಂಗೆ ಎಲ್ಲಾ ರೋಗಿಗಳನ್ನೂ ಎನ್ನ ತಲೆ ತಿಂಬಲೆ ಕಳುಸಿ ತಾನು ಆರಾಮಲ್ಲಿ ಪೇಪರು ಓದ್ಯೊಂಡೋ, ಇಲ್ಲದಿದ್ದರೆ ಆರ ಹತ್ರಾದರೂ ಹರಟೆ ಹೊಡಕ್ಕಂಡೋ ಇಕ್ಕು. ಆದರೆ ಎನಗೆ ಹಾಂಗೆ ಮಾಡ್ಳೆ ಅರಡಿತ್ತಿಲ್ಲೆ. ಅವು ಗೊಂತಿಲ್ಲದ್ದಕ್ಕೆ ಕೇಳುದು ಅಲ್ಲದೋ? ಹಾಂಗಾಗಿ ಆನು ಅವು ಹೇಳಿದ್ದಕ್ಕೆ, ಕೇಳಿದ್ದಕ್ಕೆ ಎಲ್ಲಾ ಉತ್ತರ ಕೊಡುತ್ತೆ. ಬೇಜಾರ ಮಾಡದ್ದೆ, ಸರಿಯಾಗಿ ಪರೀಕ್ಷೆ ಮಾಡಿ ಮದ್ದೊ ಇಂಜೆಕ್ಷನೋ ಮಾತ್ರೆಯನ್ನೋ ಕೊಡುತ್ತೆ. ಅದಕ್ಕೆ ಅಲ್ಯಾಣವಕ್ಕೆ ಆನು ಹೇಳಿರೆ ತುಂಬಾ ಪ್ರೀತಿ. ಆಸ್ಪತ್ರೆಗೆ ಬಂದಕೂಡ್ಳೆ ಒಂದಾರಿ ಕಾಲು ಹಿಡಿಗು. ಅವರ ಕಾಯಿಲೆ ಗುಣ ಆದರೆ ಮತ್ತೊಂದಾರಿ ಬಪ್ಪಾಗ, ನೆಟ್ಟಿಕಾಯಿಯನ್ನೋ ಹಸಿ ಕಡ್ಲೆ ಸೊಪ್ಪನ್ನೋ, ನೆಲಕಡ್ಲೆಯನ್ನೋ ತೆಕ್ಕೊಂಡು ಬಕ್ಕು. ಗೌಡಂಗೊ ಮನೇಂದ ಕಾಸಿದ ತಾಜಾ ತುಪ್ಪ ತೆಕ್ಕೊಂಡು ಬಕ್ಕು. ಗೌಡಂಗೊ ಮನೇಂದ ಕಾಸಿದ ತಾಜಾ ತುಪ್ಪ ತೆಕ್ಕೊಂಡು ಬಕ್ಕು. ಹಬ್ಬ ಹರಿದಿನಲ್ಲಿ ಮಾಡಿದ ಹೋಳಿಗೆ ಕಟ್ಯೊಂಡು ಬಂದು "ಅವ್ವಾ, ಚುಕ್ಕುಗಳಿಗೇಂತ ತಂದೀನ್ರಿ. ಮನೆಕಡೆ ಕೊಟ್ಟು ಬರ್ಲೇನ್ರಿ" ಹೇಳಿ ಹೇಳುಗು" ಆಯಿತು. ಮನೆಗೆ ಕೊಟ್ಟು ಬನ್ನಿ ಗೌಡ್ರೆ' ಹೇಳಿರೆ ಎನ್ನ ಮನೆಯವಕ್ಕೆ ಕೋಪ ಬಕ್ಕು.

"ಎಂತಕೆ ಹಾಂಗಿದ್ದರ ಎಲ್ಲಾ ತೆಕ್ಕೊಳ್ತೆ ಬೇಡ ಹೇಳೇಕು ನಾವು ಮದ್ದು ಕೊಟ್ಟದಕ್ಕೆ ಬಿಲ್ಲು ಮಾಡುತ್ತಿಲ್ಲೆಯೋ? ಮತ್ತೇಕೆ ಇವೆಲ್ಲಾ! ಬೇಡ ಹೇಳೇಕು ಹೇಳುಗು.

"ಅಷ್ಟು ಪ್ರೀತಿಲಿ ಅವು ತಂದು ಕೊಡುವಾಗ ಬೇಡ ಹೇಳಿ ಅವರ ಮನಸ್ಸು ನೋಯಿಸಲೆ ಎನ್ನಂದ ಆವುತ್ತಿಲ್ಲೆ. ಆನಾಗಿ ಯಾವುದನ್ನೂ ಅವರ ಹತ್ರೆ ಬೇಡುತ್ತಿಲ್ಲೆ."

"ಗೌಡ್ರೆ ಯಾಕೆ ಇವನ್ನೆಲ್ಲಾ ತಂದು ಕೊಡುತ್ತೀರಿ' ಹೇಳಿ ಕೇಳಿರೆ

"ಅವ್ವಾ, ಇವೆಲ್ಲಾ ಮನ್ಯಾಗ, ಹೊಲದಾಗಿ ಬಂದಾವ್ರಿ, ನಾವೇನು ಕಾಸು ಕೊಟ್ಟು ತರ್ತೀವಾ? ಬರೋವಾಗ ಇಷ್ಟು ಹಿಡ್ಕೊಂಡು ಬರ್ತೀವ್ರಿ, ಬೇಡ ಅನ್ಬೇಡ್ರಿ ಅವ್ವಾ, ನೀವು ನಮಗೆಲ್ಲಾ ಹಡದ ತಾಯಿ ಇದ್ದಾಂಗ್ರಿ, ಎಷ್ಟು ಹೊತ್ತಿನಾಗೆ ಬಂದ್ರೂ ಬ್ಯಾಸರ ಪಡದೆ ಇಲಾಜು ಮಾಡಿ, ಕಾಯಿಲೆಯಿಂದ ಬಡಾನೆ ಪಾರು ಮಾಡ್ತೀರಿ. ದೇವ್ರು ನಿಮ್ಮನ್ನು, ಚುಕ್ಕುಗಳನ್ನು ತಣ್ಣಗಿಡ್ಲಿ. ನಾವು ಅದನ್ನೇ ಸಿವನಿಗೆ ಬೇಡ್ಕೊಂಬುದು ಹೇಳಿ ಮಾತು ಮುಗುಶುತ್ತವು."

ಹೀಂಗಿಪ್ಪವರ ನೋಯಿಸುವುದಾದರೂ ಹೇಂಗೆ? ಅದಕ್ಕೆ ತಂದದರ ಮನಃಪೂರ್ವಕವಾಗಿ ತೆಕ್ಕೊಳ್ತೆ. ಅದರಲ್ಲಿ ಅವರ ಪ್ರೀತಿ ವಿಶ್ವಾಸವನ್ನೂ ಕಾಣುತ್ತೆ.

ಎಂಗಳ ಆಸ್ಪತ್ರಯ ಹೆಸರು ಸುತ್ತಮುತ್ತಲೂ ಹಬ್ಬಿತ್ತು. ದಂಡೋತಿ, ಮಾಲ್ಖೇಡ, ತೇಂಗ್ಲಿ ದೊಂಗರಗಾಂವು, ಸಾತನೂರು, ಬಂಕಲಿಗಿ, ಸೇಡಂ, ಶಹಬಾದ್‌ವರಗೂ ರೋಗಿಗೊ ಬಪ್ಪಲೆ ಸುರು ಆತು. ಕನಿಷ್ಠ ಹತ್ತು ಎತ್ತಿನ ಬಂಡಿ ಆದರೂ ಎಂಗಳ ಆಸ್ಪತ್ರೆಯ ಎದುರು ನಿಂದೊಂಡು ಇಕ್ಕು. ಉದಿಯಪ್ಪಾಗ ಎಂಟು ಗಂಟೆಗೆ ಆಸ್ಪತ್ರೆ ಸುರುವಾದರೆ ಮಧ್ಯಾಹ್ನ ಮೂರು ಗಂಟೆ ಆತರೂ ರೋಗಿಗಳ ದಂಡು ಮುಗಿಯ. ಅವಕ್ಕೆ ಹತ್ತು ಸಾರಿ ಹೇಳಿದ್ದನ್ನೆ ಹೇಳೇಕು. ಕೇಳಿದ್ದನ್ನೇ ಕೇಳೇಕು. ಎಂತ ಮಾಡುದು? ಅವಕ್ಕೆ ಅರ್ಥ ಅಪ್ಪದು ರಜಾ ನಿಧಾನಲ್ಲಿ ಅಷ್ಟಕ್ಕೆ ನಾವು ತಾಳ್ಮೆ ಕಳಕ್ಕೊಂಡರೆ ಹೇಂಗೆ? ಆನು ಹೇಳಿಹೇಳಿ ಬಾಯಿ ಬಿಚ್ಚುವಾಗ ಎನ್ನ ಕಾಂಪೌಂಡರ್-ಅಷ್ಟೇ ತಾಳ್ಮೆಂದ ಅದರ ಮುಂದುವರ್ಸುಗು.

ಈಗ ಆನು ಹೇಳೇಕಾದ್ದರ ಹೇಳ್ಳೆ ಸುರು ಮಾಡುತ್ತೆ. ರಾಮತೀರ್ಥ ಹೇಳುವ ಹಳ್ಳಿಂದ ರಾಚಪ್ಪ ಹೇಳುವ ಮನುಷ್ಯ. ಅದರ ಮಗನ ಕರಕ್ಕೊಂಡು ಆಸ್ಪತ್ರೆಗೆ ಕರಕ್ಕೊಂಡು ಬಂದ ಕತೆಯ. ರಾಮತೀರ್ಥ ಹೇಳಿರೆ ಸುಮಾರು ಇಪ್ಪತ್ತು ಮೈಲು ದೂರ ಹಾದಿ. ಎಂದ್ರಾಣ ಹಾಂಗೆ ಅಂದೂ ಆಸ್ಪತ್ರೆಲಿ ಗಿಜಿಗುಟ್ಟಿಗೊಂಡು ಜೆನಂಗಳೂ, ರೋಗಿಗಳೂ ಇತ್ತಿದ್ದವು. ಸುಮಾರು ಮಧ್ಯಾಹ್ನ ಎರಡು ಗಂಟೆ ಹೊತ್ತಿಂಗೆ, ಒಂದು ಮನುಷ್ಯ ಸುಮಾರು ಮೂರು ವರ್ಷದ ಮಗನ ಹೆಗಲ ಮೇಲೆ ಹೊತ್ತೊಂಡು ಬಂತು. ಆ ಮಗಂಗೆ ಮಂಗನ ಮೋರೆಯ ಎಲ್ಲಾ ಲಕ್ಷಣವೂ ಇತ್ತು. ಕೊತ್ತಾಳಿಕೆಯ ಹಾಂಗಿದ್ದ ಕೈ ಕಾಲು, ಎಲುಗಿಂಗೆ ಅಂಟಿ ಹಿಡುದ ಚರ್ಮ - ಮುದುಕನ ಮೋರೆ, ಗುಳಿ ಬಿದ್ದ ಕಣ್ಣುಗೊ, ಕೆಂಚು ಅಡರಿದ ತಲೆ ಕೂದಲು ಎದೆಗೂಡಿಲ್ಲಿ ಎಷ್ಟು ಎಲುಗು ಇದ್ದು ಹೇಳಿ ಎಣಿಸಿ ಹೇಳ್ಳಕ್ಕು -ಮೆಯಿಲಿ ಮಾಂಸ ಹೇಳುವ ಅಂಶ ದುರ್ಬಿನು ಹುಡುಕ್ಕಿದರೂ ಸಿಕ್ಕ. ಹೀಂಗಿಪ್ಪ ಮಗುವಿನ ಕರಕ್ಕೊಂಡು ಆಸ್ಪತ್ರೆಯ ಒಳಂಗೆ ಸೀದಾ ಹೊಕ್ಕತ್ತು. ಎನ್ನ ನರ್ಸ್ ಅದರ ತಡದತ್ತು "ಅಲ್ಲೆ

ಹೊರಗೆ ಹೋಗಿ ಕೂತುಕೊ. ನಿನ್ನಕ್ಕಿಂತಲೂ ಮೊದಲು ಬಂದವರು ಬಹಳ ಜನ ಕಾದಿದ್ದಾರೆ. ಅವರಿಗಾದ ಮೇಲೆ ಒಳಗೆ ಬಾ" ಹೇಳಿ ಹೆರದಬ್ಬಿತ್ತು.

"ಯವ್ವಾ, ಹಾಂಗ ಮಾಡಬೇಡ್ರಿ. ನಾ ರಾಮತೀರ್ಥಂದ ಮಗೂಗೆ ಕಚ್ಕೊಂಡು ಬಂದೀನ್ರಿ. ನನ್ ಕೂಸಿಗೆ ಬಹಳ ಜೆಡ್ಡಾಗಿದೇರಿ. ಮೊದ್ಲು ನನ್ಗೆ ಒಳಕ್ಕೆ ಬಿಡಿರಿ ಕಾಲು ಬೀಳ್ತೇನ್ರಿ" ಹೇಳಿ ಅಂಗಲಾಚಿಕೊಂಡಿತ್ತು.

"ಇಲ್ಲಾ ನಿನ್ಕಿಂತ ಮೊದಲು ಬಂದವರನ್ನು ನೋಡಿದ ಮೇಲೆ ನಿನ್ನನ್ನು ಒಳಗೆ ಕಳುಹಿಸುತ್ತೇನೆ" ಹೇಳಿತ್ತು ನರ್ಸ್ ಸುಶೀಲ.

"ನೀವು ಏನಾರ ಅಂದುಕೋರಿ. ನಾನು ನೇರ ಒಳಕ್ಕೆ ಹೋಗಿ, ಅವ್ವಾವ್ರಿಗೆ ಪೋರನ ತೋರ್ಸಿಯೇ ಬುಡುತ್ತೀನಿ." ಹೇಳಿ ಬಾಗಿಲು ದಬ್ಬಿ ಒಳಬಂತು.

ಸುಶೀಲೆ ಪುನಃ ಹೆರ ಕಳುಸಲೆ ಸಿದ್ದ ಆತು.

"ಅವ್ವಾ, ನಿಮ್ ಕಾಲು ಬೀಳ್ತೀನಿ. ಈ ಕೂಸಿಗಿಸ್ಟು ನೋಡಿ ಕಳ್ಸಿರಿ" ಹೇಳಿ ನೀಟಾಂಪ ಎನ್ನ ಕಾಲಿಂಗೆ ಬಿದ್ದತ್ತು.

"ಹೇಗಿದ್ದರೂ ಒಳಗೆ ಬಂದಿದ್ದಾನಲ್ಲಾ. ಮಗುವನ್ನು ನೋಡಿ ಕಳುಹಿಸಿದರಾಯ್ತು" ಹೇಳಿ ಆನೂ ಹೇಳಿದೆ.

ಸುಶೀಲ ಮನಸ್ಸಿಲ್ಲದ ಮನಸ್ಸಿಂದ ಸುಮ್ಮನಾತು. ಹೆರ ಹೋಗಿ ನಿಂದತ್ತು.

"ಚಲೋ ಹೊತ್ತಿನಾಗ ಪರೀಕ್ಷೆ ಮಾಡ್ರವ್ವಾ, ಇಪ್ಪತ್ತು ಮೈಲಿ ದೂರದಿಂದ ನಡಕ್ಕೋತ ಬಂದೀನಿ. ಮಗೀನ ನಿಮ್ಮ ಕಣ್ಣಿಗೆ ತೋರ್ಸು ಬೇಕೂಂತ" ಹೇಳಿ ಪರೀಕ್ಷೆ ಮಾಡುವ ಮಂಚದ ಮೇಗೆ ಮನುಶಿತ್ತು. ಆ ಮಗುವಿನ ಪರೀಕ್ಷೆ ಮಾಡ್ಳೆ ಎಂತ ಇದ್ದು. ಅದಕ್ಕೆ 'ಗ್ರಹಣಿ' ಕಾಯಿಲೆ. ಅದನ್ನೇ ಪಕ್ಕಿ ಕಡಪ್ಪು ಹೇಳಿ ಹೇಳುತ್ತವು. ಸರಿಯಾದ ಆಹಾರ ಮಕ್ಕೊಗೆ ಕೊಡದಿದ್ದರೆ ಪೋಷಕಾಂಶಗಳ ಕೊರತ್ತೆ ಬಂತ್ತು. ಆ ಕಾಯಿಲೆಯನ್ನೇ ಗುಲ್ಬರ್ಗಾದ ಕಡೆ ಮುಟ್ಟುದೋಶ ಹೇಳಿಯೂ ಹೇಳುತ್ತವು.

"ಯವ್ವಾ, ಹೇಂಗಾರ ಮಾಡಿ ನನ್ನ ಪೋರಗಿಷ್ಟು ನೆಟ್ಟಗೆ ಮಾಡ್ರಿ, ನಿಮ್ಮ ಹೆಸರೇಳಿ ಬದುಕುತ್ತದೆ. ಎಲ್ಲಾ ಕಡೆ ತಿರುಗಿನ್ರಿ, ಮಂತ್ರ ತಂತ್ರ ಎಲ್ಲಾ ಮಾಡ್ಸೀನ್ರಿ, ಎಲ್ಲೂ ಬಗೆ ಹರಿದಿಲ್ಲಾರೀ ಅದಕ್ಕೆ ನಿಮ್ಮ ತಾವ ಬಂದೀನ್ರಿ, ಹತ್ತೂರಿನಾಗ ನಿಮ್ಮ ಹೆಸ್ರೈತ್ರಿ. ನನ್ನ ಪೋರಗಿಷ್ಟು ವಾಸಿ ಮಾಡಿ ಪುಣ್ಯ ಕಟ್ಕೊರಿ ತಾಯಿ" ಹೇಳಿ ಮತ್ತೊಂದಾರಿ ಕಾಲಿಂಗೆ ಅಡ್ಡ ಬಿದ್ದತ್ತು.

"ನನ್ನಿಂದಾದ ಪ್ರಯತ್ನ ಮಾಡುತ್ತೇನೆ. ನಿನ್ನ ಹೆಸರೇನಂದೆ" ಕೇಳಿದೆ

"ರಾಚಪ್ಪಾರಿ. ಮಗೀನ ಎಸ್ರು ತಿಮ್ಮಪ್ಪಾರೀ. ಬೆಟ್ಟದ ಮೇಲಿನ ದ್ಯಾವ್ರ ಹೆಸ್ರ ಇಟ್ಟೀನ್ರಿ."

"ರಾಚಪ್ಪ ಹೆದರಬೇಡ. ನಿನ್ನ ಮಗುವಿಗೆ ತುಂಬಾ ನಿತ್ರಾಣ ಇದೆ; ಸರಿಯಾಗಿ ನೋಡಿದ್ರೆ ಕಾಯಿಲೆ ಗುಣವಾಗಬಹುದು. ಆದರೂ ವಾಸಿಯಾಗಲಿಕ್ಕೆ ಐದಾರು ತಿಂಗಳು ಬೇಕಾಗಬಹುದು.

"ಆಗಲವ್ವಾ"

"ಮತ್ತೆ ನಾಲ್ಕೈದು ಬಾರಿ ಆಸ್ಪತ್ರೆಗೆ ಬರಬೇಕಾಗುತ್ತದೆ"

"ನೀವೆಸ್ಟು ಸಾರಿ ಬಾ ಅಂತೀರೋ ಅಷ್ಟೂ ಬಾರಿ ಬರುತ್ತೇನವ್ವಾ ನನ್ನ ಪೋರನಿಗೆ ವಾಸಿ ಮಾಡ್ರಿ. ನಾನು ನಿಮ್ಮನ್ನು ಅಷ್ಟೇ ಬೇಡ್ಕೊಂಬುದು" ವಿನೀತ ಆಗಿ ಹೇಳಿತ್ತು ರಾಚಪ್ಪ.

"ಈಗ ನಾನೊಂದು ಇಂಜೆಕ್ಷನ್ ಕೊಡುತ್ತೇನೆ. ಸ್ವಲ್ಪ ಮಗುವನ್ನು ಗಟ್ಟಿಯಾಗಿ ಹಿಡುಕೋ" ಹೇಳಿದೆ.

"ಇದಕ್ಕೆಲ್ಲಿ ಸೂಜಿ ಕೊಡ್ತೀರವ್ವಾ, ಮೈಮೇಲೆ ಬರೀ ಚಕ್ಕಳ ಐತ್ರಿ" ಹೇಳಿತ್ತು ರಾಚಪ್ಪ. ಅದು ಹೇಳಿದ್ದು ಸರಿ ಹೇಳಿ ಕಂಡತ್ತು. ಅದರ ಮೈಲಿ ಮಾಂಸದ ಚೂರು ಎಲ್ಲಿಯೂ ಕಂಡತ್ತಿಲ್ಲೆ.

"ಬೇಡ ಬಿಡು ರಾಚಪ್ಪ ಒಳ್ಳೆ ಔಷಧ ಮಾತ್ರೆ ಕೊಡುತ್ತೇನೆ. ತೆಗೆದುಕೊಂಡು ಹೋಗು" ಹೇಳಿದೆ.

"ಅವ್ವಾ ಪೊಟ್ಟ್ಯಾ ಗೋಲಿಗೀಲಿ ನುಂಗಾಗಿಲ್ರಿ. ಔಷದ್ಯ ಪೂರಾ ಉಗುಳ್ತಾನ್ರಿ" ಹೇಳಿತ್ತು ರಾಚಪ್ಪ.

"ಹಾಗಾದ್ರೆ ಒಳ್ಳೆ ತಾಕತ್ತು ಬಾಟ್ಲಿ ತೆಗೆದುಕೊಂಡು ಹೋಗು. ಹೇಗಾದರೂ ಮಾಡಿ, ಕುಡಿಸು" ಎಂದೆ.

"ಅದೂ ಕುಡಿಯಾಂಗಿಲ್ರಿ"

"ಬಾಯಿ ತೆಗೆಸಿ ಕುಡಿಸಬೇಕು ರಾಚಪ್ಪ. ಕುಡಿಯಾಗಿಲ್ಲ ಅಂದ್ರೆ ಹೇಗೆ?" ಆನೂ ರಜಾ ಗರಂಮಿನಲ್ಲಿಯೇ ಹೇಳಿದೆ.

"ಕೈ ಕಡಿತಾನ್ರಿ ಅಷ್ಟು ತಾಕತ್ತಿದೆ ಅವನ್ಗೆ" ಹೇಳಿ ಹಲ್ಲು ಕಿಸುದತ್ತು.

"ಹಾಗಾದರೆ ಏನು ಕೊಡ್ಬಿ ನೀನೇ ಹೇಳು" ಅದನ್ನೇ ಕೇಳಿದೆ.

"ಏನೂ ಬ್ಯಾಡ್ರಿ. ಚಲೋ ಹೊತ್ತಿನಾಗ ಆಶೀರ್ವಾದ ಮಾಡ್ರಿ ಅಷ್ಟೇ ಸಾಕು" ಹೇಳಿತ್ತು ರಾಚಪ್ಪ.

"ಹತ್ತೂರ್ನಾಗ ಎಸ್ರು ಬಂದವರು ತಾವು. ನಿನ್ನ ಪೊಟ್ಯಾಗೊಮ್ಮೆ ಮೈಸೂರು ಡಾಕ್ಟ್ರತ್ತಿಯ ನಜರಕ್ಕೆ ಹಾಕು. ಚಕ್ಕುಗಳ ಕಾಯಿಲೆಗೆ ಎತ್ತಿದ ಕೈ ಅವರದ್ದು. ಎಂತ ಊರವ್ರೆಲ್ಲಾ ಹೇಳ್ಯಾರಿ. ಅದಕ್ಕೆ ನೆಡಿಕ್ಕೋತ ಇಲ್ಲಿಗಂಟೆ ಬಂದೆ. ನನ್ನ ಪೋಲಿ ತಿಮ್ಮಣ್ಣಗೆ ಕಾಯಿಲೆ ವಾಸಿಯಾಗಲಿ ಎಂದು ಆಶೀರ್ವಾದ ಮಾಡಿರಿ ಅಷ್ಟೇ ಸಾಕು" ಪೇಳಿತ್ತು ರಾಚಪ್ಪ. ಅದರ ಮಗನ ಎನ್ನ ಕಾಲ ಮೇಗೆ ಹಾಕಿತ್ತು.

"ನಿನ್ನ ಮಗ ಬೇಗನೆ ನೆಟ್ಟಗಾಗಲಿ" ಹೇಳಿ ಆಶೀರ್ವಾದ ಮಾಡಿದೆ.

"ನಾನಿನ್ನು ಊರ ಕಡೆ ಹೊಂಟೀನಿ. ನೀವೆಷ್ಟು ಬಾರಿ ಬಾ ಎಂದ್ರೂ ಬರ್ತೀನಿ. ತಪ್ಪಾಕಿಲ್ಲ" ಹೇಳಿ ಅದರ ಮಗನ ಎತ್ತಿ ತಲೆ ಮೇಲೆ ಕೂರ್ಸೊಂಡು ಹೋತು ರಾಚಪ್ಪ.

"ಸುಶೀಲಾ, ಇನ್ನೊಬ್ಬನನ್ನು ಕಳುಹಿಸಿ ಒಳಕ್ಕೆ ಎಂದೆ

"ಈ ರೋಗಿ ಬಿಲ್ಲು ಕೊಟ್ಟು ಹೋಯಿತೇ" ವಿಚಾರ್ಸಿತ್ತು ಸುಶೀಲ.

"ಅವನಿಗೇನೂ ಚಾರ್ಜು ಮಾಡಲಿಲ್ಲ" ಹೇಳಿದೆ.

"ಯಾಕೆ" ಕೇಳಿತ್ತು ಸುಶೀಲ.

"ಏನಾದರೂ ಔಷಧ ಮಾತ್ರೆ ಇಂಜೆಕ್ಷನ್ ಕೊಟ್ಟಿದ್ದರೆ ಚಾರ್ಜು ಮಾಡಬಹುದಿತ್ತು. ಏನೂ ಕೊಟ್ಟಿಲ್ಲವಲ್ಲಾ?

"ಸುಮಾರು ಒಂದು ಗಂಟೆ ಸಮಯ ಹಾಳು ಮಾಡಿದ. ಇಷ್ಟರೊಳಗೆ ನಾಲ್ಕಾರು ರೋಗಿಗಳನ್ನು ನೋಡಿ ಆಗುತ್ತಿತ್ತು" ಗೊಣಗಿತ್ತು ಸುಶೀಲ.

"ಇರಲಿ ಮದ್ದಿಗೆ ಅಂತ ತುಂಬಾ ಜನ ಬರುತ್ತಾರೆ. ನಮ್ಮಲ್ಲಿಗೆ. ಆದರೆ ಆಶೀರ್ವಾದಕ್ಕಾಗಿ ಯಾರಾದರೂ ಬರುತ್ತಾರೆಯೋ" ಹೇಳಿ ನೆಗೆ ಮಾಡಿದೆ ಆನು.

"ನಿಮಗೆಲ್ಲಾ ತಮಾಶೆ ಡಾಕ್ಟ್ರೇ. ಆದರೆ ನನಗೆ ಹೊಟ್ಟೆ ಉರಿಯುತ್ತದೆ. ಏನಿಲ್ಲ ಅಂದರೂ ಇನ್ನೂರು ರೂಪಾಯಿ ಆದರೂ ಕೈ ಸೇರುತ್ತಿತ್ತು" ಹೇಳಿ ಬೇಜಾರ ಮಾಡಿತ್ತುಯ.

"ಇನ್ನೊಂದು ರೋಗಿಯ ದಿನಿಗೇಳು. ಅವನಿಗೆ ಬಿಲ್ಲು ಮಾಡಿ ಬಿಡುತ್ತೇನೆ" ಹೇಳಿ ಅದರ ಸಮಾಧಾನ ಮಾಡಿದೆ.

ಇದಾಗಿ ಸುಮಾರು ಹನ್ನೆರಡು ದಿನ ಕಳುದ ಮೇಗೆ ಸಾವ್ಕಾರ ಬಸಣ್ಣಪ್ಪ ಆಸ್ಪತ್ರೆಗೆ ಹಾಜರಾದರು. ಅವರೂ ರಾಮತೀರ್ಥದವರೆ. ಆಗಾಗ ಆಸ್ಪತ್ರೆಗೆ ಬಂದು ಹೋಗ್ಯೊಂಡು ಇರುತ್ತ.

"ಯಾಕೆ ಸಾವ್ಕಾರೇ ಅಪರೂಪಕ್ಕೆ ಬಂದೀರಿ" ಆಸ್ಪತ್ರೆ ಕಡೆಗೆ ಹೇಳಿ ವಿಚಾರ್ಸಿದೆ.

"ಅಡ್ತಿಯಾಗ ಮಾಲು ಹಚ್ಚೇನಿ. ಹಾಂಗೇ ದವಾಖಾನೆ ಕಡೆಗೆ ಹೋಗಿ ಬಂದ್ರಾಯ್ತು ಅಂತ ಬಂದೇನ್ರಿ" ಹೇಳಿದ ಸಾವ್ಕಾರ ಬಸಣ್ಣಪ್ಪ

"ಯಾಕೆ ನಿಮಗೆ ಹುಶಾರಿಲ್ಲವೇ?"

"ನಾನು ನೆಟ್ಟಗೆ ಇದ್ದೇನ್ರಿ. ಮೊನ್ನೆ ಮೊನ್ನೆ ನಮ್ಮ ರಾಚಣ್ಣ ನಿಮ್ಮಕಡೆ ಬಂದಾನೋ ಇಲ್ಲೋ ಅಂತ ಒಸಿ ವಿಚಾರ್ಸಿ ಹೋಗೋಣ ಅಂತ ಬಂದೇನ್ರಿ"

"ಹೋ.. ಅವನೇ ಒಂದು ಚಿಕ್ಕ ಮಗುವನ್ನು ಎತ್ತಿಕೊಂಡು ಬಂದಿದ್ದ. ಬಹಳ ಕಮ್ಜೂರಿ ಹುಡುಗ. 'ತಿಪ್ಪಣ್ಣ' ಅಂತೇನೋ ಹೆಸರು ಅಲ್ಲವೇ" ಕೇಳಿದೆ.

ಬರೋಬರಿ ಹೇಳೀರಿ. ಆತನೇ ನೋಡ್ರಿ. ಅವನ ನಮ್ಮ ಆಳು ಮಗಾರಿ. ಅವನ ಪೊಚ್ಯಾಗ ಉಸಾರಿಲ್ಲ ಅಂದ. 'ನಡಿ ಹೋಗು ಚಿತಾಪುರಕ್ಕೆ. ಅಲ್ಲಿ ಅವ್ವಾವರಿಗೆ ತೋರ್ಸು' ಅಂತ ಹೇಳಿ ಶಂಭರ ರೂಪಾಯಿನ್ನೂ ಕೊಟ್ಟೇನ್ರಿ' ನೀವು ಯಾಕೋ ಅದಕ್ಕೆ ಇಲಾಜು ಬೇಡ ಅಂತ ಹೇಳೀರಂತೆ. ಹಲಕಟ್ಟಿ ಮುತ್ತಯ್ಯನ ಬಲ್ಲಿ ಹೋಗಿ ತಾಯತ ಕಟ್ಟಿಸಿಕೋ ಅಂದರಂತೆ" ಆಕ್ಷೇಪಣೆ ಇದ್ದತ್ತು ಸಾವ್ಕಾರನ ಮಾತಿನ ಧಾಟಿಲಿ.

"ಸಾವ್ಕಾರೇ ನಾನು ಡಾಕ್ಟ್ರಲ್ಲವೇ? ರೋಗಿಗೆ ಔಷಧ, ಇಂಜೆಕ್ಷನ್ ಮಾತ್ರೆ ಅಲ್ಲದೆ ಇನ್ನೇನಾದರೂ ಹೇಳುತ್ತೇನೆಯೇ? ಅವನೇ ಯವುದೂ ಬೇಡ ಅಂದ. ಮತ್ಯಾಕೆ ಮಗುವನ್ನು ಇಲ್ಲಿಗೆ ಕರಕ್ಕೊಂಡು ಬಂದಿ? ಅಂತ ಕೇಳಿದೆ. ನಿಮ್ಮ

ನಜರಾಕ್ಕೆ ಹಾಕಿ ಆಶೀರ್ವಾದ ಪಡೆಯಲು ಅಂದ. ನಾನು ಮಗುವಿಗೆ ಆಶೀರ್ವಾದ ಮಾಡಿ ಕಳುಹಿಸಿದೆ. ಇನ್ನೇನು ಮಾಡ್ಲಿ ಸಾವ್ಕಾರೇ" ಹೇಳಿ ನಡದ ಸಂಗತಿಯ ಹಾಂಗೇ ತಿಳುಶಿದೆ.

"ಕಳ್ಳ ಸೂಳೇಮಕ್ಳು. ಸುಳ್ಳು ಸುಳ್ಳೇ ಬೊಗಳ್ತವೆ. ನೀವು ಕೈ ಹಿಡಿದಿದ್ದರೆ ಪೋರ ನೆಟ್ಟಗಾಗುತ್ತಿತ್ತು"

"ಈಗ ಮಗು ಹೇಗಿದೆ ಸಾವ್ಕಾರೇ?"

"ಇವತ್ತಿಗೆ ಎಂಟು ದಿನ ಹಿಂದೆ ಸರಿ ಹೋಯ್ತು. ಹೀಂಗೆ ಪಯಿಲೇ ಕೂಸನ್ನೂ ಮುಕ್ಕಿ ತಿಂದಿತು ಬಿಕನಾಸಿ" – ಚಿತಾಪುರದ ಡಾಕ್ಟ್ರಮ್ಮನಿಗೆ ತೋರ್ಸಿಲ್ಲೇನು ಅಂತ ಊರವರು ಕೇಳಿರೆ

"ಹೋಗೀನಿ ಅವು ಚಲೋ ಔಷಧ್ಯ ಕೊಟ್ಟಿಲ್ಲ' ಅಂತ ಗೋಗರದಾನ್ರಿ ಅಂತಾನ್ರಿ ಬದಮಾಸು. ಸುಳ್ಳೆ ನಿಮ್ ಹೆಸ್ರಿಗೆ ಮಸಿ ಬಳಿತಾನೆ"

"ಹೋಗಲಿ ಬಿಡಿ ಸಾವ್ಕಾರೇ. ತಿಳಿಯದೇ ಮಾಡುತ್ತಾರೆ" ಹೇಳಿ ಸಾವ್ಕಾರ್ ಬಸಣ್ಣಪ್ಪನ ಸಮಾಧಾನ ಮಾಡಿದೆ.

"ಹಂಗೇಂಗೇ ಆಕ್ಕಾದ್ರಿ? ಊರಿಗೆ ಹೋಗಿ ಚಲೋ ಹೊತ್ತಿನಾಗ ಅವನ ಮಂಕು ಬಿಡಿಸ್ತೇನ್ರಿ. ಇನ್ನೊಮ್ಮೆ ಅವನ ಹೊಲ್ಸ ಬಾಯಾಗೆ ನಿಮ್ಮ ಹೆಸ್ರು ಬಾರದ್ಹಾಂಗ ನೋಡ್ಕೋತೀನ್ರಿ. ಬುಡುತ್ತಿನೇನು?" ಹೇಳಿ ದುರುಸಿಕೊಂಡೇ ಸಾವ್ಕಾರು ಬಸಣ್ಣಪ್ಪ ಆಸ್ಪತ್ರೆಯ ಮೆಟ್ಳು ಇಳುಕ್ಕೊಂಡು ಹೋದ.

ಆ ಬೆಪ್ಪು ರಾಚಪ್ಪಂಗೆ ಇಷ್ಟು ಲೊಟ್ಟೆ ಹೇಳ್ಳೆ ಅರಡಿಗು ಹೇಳಿ ಆನೂ ಜಾನ್ಸಿತ್ತಿದ್ದಿಲ್ಲೆ. ಈ ಮೊಗಲಾಯಿ ಮೋಟಾ ಜೆನಂಗೋಕ್ಕೆ, ಬೇಡದ್ದಲ್ಲಿ ಬೇಕಾದಷ್ಟು ಬುದ್ಧಿಯ ದೇವರು ಕೊಡುತ್ತ ಹೇಳಿ ಎನಗೂ ಅರ್ಥ ಆತು.

○

# ಡಾ॥ ಸಬಿತಾ ಮರಕಿಣಿಯವರ

# 'ಗೆದ್ದಳು ಕಾವೇರಿ'

## ಕಾದಂಬರಿ – ಒಂದು

– ಡಾ॥ ಹರಿಕೃಷ್ಣ ಭರಣ್ಯ

ಡಾ॥ ಶ್ರೀಮತಿ ಸಬಿತಾ ಮರಕಿಣಿಯವರು 'ಮುಗಿಲು ಬಿರಿಯಿತು' ಕಾದಂಬರಿಯನ್ನೂ 'ಕಮಲಕ್ಕನ ಕತೆ' ಎಂಬ ನೀಳ್ಗತೆಯನ್ನೂ 2005ರಲ್ಲಿ ಪ್ರಕಟಿಸಿದ್ದಾರೆ. ಈ ರಚನೆಗಳು 1970ರ ಸುಮಾರಿಗೆ ಬರೆಯಲಾದವುಗಳು. ಇವುಗಳು ಕುಂಬಳೆ ಸೀಮೆಯ ಹವ್ಯಕ ಮನೆಯೊಳಗಿನ ಕೆಲವು ವಿಚಾರಗಳನ್ನು ಅದರಲ್ಲೂ ವಿಧವೆಯರ ಬಾಳನ್ನು ಮುಖ್ಯವಾಗಿ ಚಿತ್ರಿಸುತ್ತವೆ. ಮುಗಿಲು ಬಿರಿಯಿತು ಕಾದಂಬರಿಯ ಅಬ್ಬುಚ್ಚಿ ಹಾಗೂ ಕಮಲಕ್ಕನ ಕತೆಯ ಕಮಲಕ್ಕ, ಈ ಎರಡೂ ಪಾತ್ರಗಳು ಗಂಡನನ್ನು ಕಳೆದುಕೊಂಡು ಬದುಕಿನಲ್ಲಿ ಎದುರಿಸುವ ಸಮಸ್ಯೆಗಳು; ಮಾನಸಿಕವಾಗಿಯೂ ದೈಹಿಕವಾಗಿಯೂ ಪಡುವ ಯಾತನೆಗಳನ್ನು ಚಿತ್ರಿಸುತ್ತವೆ. ಇವರದೇ ಇನ್ನೊಂದು ಕಾದಂಬರಿ 'ಪಾಮಕ್ಕನ ಸಂಸಾರ' ದಲ್ಲಿ ಹವೀಕ ಕುಟುಂಬದೊಂದಿಗೆ ಇರುವ ಇತರ ಜಾತಿಯ ಸಂಬಂಧ – ಪ್ರೀತಿ–ವಾತ್ಸಲ್ಯಗಳನ್ನು ಚಿತ್ರಿಸಲಾಗಿದ್ದು, ಆ ಕಾಲಕ್ಕೆ ಬೇರೆ ಜಾತಿಯ ಹುಡುಗಿಯನ್ನು ಮದುವೆಯಾಗುವ ಬ್ರಾಹ್ಮಣ ಯುವಕನೊಬ್ಬನು ಎದುರಿಸಬೇಕಾಗಿದ್ದ ಸಂದರ್ಭಗಳನ್ನು ವಿಶ್ಲೇಷಿಸಲಾಗಿದೆ. ಜೊತೆಗೆ, ಒಂದು ಕುಟುಂಬದ ಸರ್ವತೋಮುಖ ಏಳಿಗೆಗೆ ಎಷ್ಟೊಂದು ಶ್ರಮ, ತ್ಯಾಗ, ಹೊಂದಾಣಿಕೆಗಳ ಅಗತ್ಯವಿದೆ, ಎಷ್ಟು ಭಯಭಕ್ತಿ ಸೇವಾ ಮನೋಭಾವಗಳು ಬೇಕಾಗುತ್ತವೆ ಎಂಬಿತ್ಯಾದಿ

ವಿಚಾರಗಳನ್ನು ಸೂಕ್ಷ್ಮವಾಗಿ ಗಮನಿಸಲಾಗಿದೆ. ಹುಟ್ಟಿನಿಂದಲೇ ಜಾತಿಯಲ್ಲ. ಮಾನವನಿಗೆ ಗುಣವೇ ಮುಖ್ಯ, ಗುಣವಿರುವೆಡೆಗೇ ಜನರು ಬರುತ್ತಾರೆ – ಧನ – ಭಾಗ್ಯಗಳು ಬರುತ್ತವೆ. ಹೀಗೆ ಅನೇಕ ಮಾನವೀಯ ತತ್ವಗಳು ಇಲ್ಲಿ ಧ್ವನಿಸುತ್ತವೆ.

ಡಾ॥ ಸಬಿತಾ ಅವರ 'ಗೆದ್ದಳು ಕಾವೇರಿ' ಅವರ ನಾಲ್ಕನೆಯ ಕೃತಿ. ಇದರಲ್ಲಿ ಕಾವೇರಿ ಎಂಬುವಳ ಸಾಹಸಗಾಥೆಯಿದೆ. ಆಕೆ ಓದಿರುವುದು ಕೇವಲ ನಾಲ್ಕನೆಯ ತರಗತಿಯವರೆಗೆ. ಬಡ ಹವ್ಯಕರ ಮನೆಯಲ್ಲಿ ಹುಟ್ಟಿದ ಈಕೆ, ಮದುವೆಯ ಮರುದಿನವೇ ವಿಧವೆಯೆನ್ನಿಸಿಕೊಂಡವಳು. ತನ್ನ ಬೆನ್ನ ಹಿಂದೆಯೇ ಹುಟ್ಟಿದ ಮೂವರು ತಂಗಿಯಂದಿರಿಗಾಗಿ ತಾನು ಮುದುಕನೊಬ್ಬನಿಗೆ ಮರು ವಿವಾಹಕ್ಕೆ ಒಪ್ಪಿದವಳಾದರೂ, ಗಂಡನು ತೀರಿಕೊಂಡ ತಕ್ಷಣ ತನ್ನ ಮನೋಬಲಕ್ಕೇ ಸವಾಲನ್ನೊಡ್ಡಿದ್ದವಳು. ತೀರಿ ಹೋದ ಗಂಡನ ಮನೆಯಿಂದ ಬರುವ ಅಶನಾರ್ಥ (ಜೀವನಾಂಶ)ದ ಮೊತ್ತದಿಂದ ತಂಗಿಯರಿಗೆಲ್ಲಾ ಸೂಕ್ತ ಸಂಬಂಧಗಳನ್ನು ಹುಡುಕಿ ಮದುವೆ ಮಾಡಿಸಿದ್ದಲ್ಲದೆ ವಯಸ್ಸಾದ ತಂದೆ ತಾಯಿಯರಿಗೂ ಬದುಕಿನಲ್ಲಿ ಒಳ್ಳೆಯ ವ್ಯವಸ್ಥೆಯನ್ನು ಮಾಡುತ್ತಾಳೆ. ತನ್ನದೇ ಕಾಲುಗಳ ಮೇಲೆ ನಿಲ್ಲುವ ಸಲುವಾಗಿ ಓದನ್ನು ಹಟ ಹಿಡಿದು ಮುಂದುವರಿಸುತ್ತಾಳೆ, ಇದಕ್ಕಾಗಿ ಊರನ್ನೇ ಬಿಟ್ಟು ದೂರದ ಕಾಶಿಗೆ ಬರಬೇಕಾಗುತ್ತದೆ. ಮಾತ್ರವಲ್ಲ, ಅಲ್ಲೇ ಹಂತಹಂತವಾಗಿ ಕಲಿತು ಡಾಕ್ಟರಳಾಗುತ್ತಾಳೆ.

ಕಾವೇರಿಯ ಸಂವೇದನೆಗಳನ್ನು ಚೆನ್ನಾಗಿ ಅರ್ಥ ಮಾಡಿಕೊಂಡ ಮೊದಲ ವ್ಯಕ್ತಿಯೆಂದರೆ ಆಕೆಯ ತಂಗಿಯ ಗಂಡನಾದ ರಘುರಾಮನಾದರೆ, ಎರಡನೆಯ ವ್ಯಕ್ತಿಯಾಗಿ ಡಾಕ್ಟರ್ ಕೇಶವ ಕಂಡು ಬರುತ್ತಾನೆ. ವೈದಿಕ ಸಂಪ್ರದಾಯದ ಮನೆತನದಲ್ಲಿ ಹುಟ್ಟು ಬೆಳೆದ ಈತ, ಮೂಢನಂಬಿಕೆಗಳನ್ನು ಧಿಕ್ಕರಿಸಿ ಒಂದು ವೈದ್ಯಕೀಯ ಶಿಕ್ಷಣವನ್ನು ಹಟದಿಂದಲೇ ಪೂರೈಸಿದ ವ್ಯಕ್ತಿ. ಕಾವೇರಿಯು ದೈಹಿಕವಾಗಿಯೂ ಮಾನಸಿಕ ವಾಗಿಯೂ ನೊಂದವಳೆಂಬುದನ್ನು ಅರ್ಥ ಮಾಡಿಕೊಂಡ ಈತನೇ ಕಾವೇರಿಯ ಕೈ ಹಿಡಿದು ಆಕೆಗೆ ಹೊಸ ಬದುಕನ್ನು ನೀಡುತ್ತಾನೆ.

ಡಾ॥ ಸಬಿತಾ ಅವರು ಒಂದೆಡೆ ಸಂಪ್ರದಾಯದ ಹಾಗೂ ಸಮಾಜದ ಬೇರೆ ಬೇರೆ ಸ್ತರಗಳ ಅನಿಸಿಕೆಗಳ ಘೋರ ಪರಿಣಾಮಗಳನ್ನು ಬಿಡಿಸುತ್ತಾರೆ, ಇನ್ನೊಂದೆಡೆ ಅವುಗಳಿಗೆಲ್ಲಾ ಸಕಾರಾತ್ಮಕವಾದ ಚಿಂತನೆಗಳನ್ನು ನೀಡುತ್ತಾ ಹೋಗುತ್ತಾರೆ, ಹೀಗಾಗಿ ಒಂದೊಂದೇ ಸುಸೂತ್ರವಾಗಿ ನಡೆಯುತ್ತಿದೆಯೇನೋ ಎನ್ನುವಂತೆ ಕಂಡರೂ, ಅದರ ಹಿಂದೆ ಸಾಕಷ್ಟು ಅಚ್ಚುಕಟ್ಟಾದ ಅಧ್ಯಯನ ಶೀಲತೆಯನ್ನು ನೋಡಬಹುದು. ಎಂದರೆ ಆರೋಗ್ಯಕರ ಮನಸ್ಸುಗಳು,

ಆತ್ಮಸ್ಥೈರ್ಯವನ್ನು ದೃಢವಾಗಿ ನಂಬುವ ಹೃದಯಗಳಿಲ್ಲಿವೆ. ಸಾಧಿಸಿದರೆ ಸಂಬಳವನ್ನು ನುಂಗಬಹುದೆಂಬ ಗಾದೆಯ ಸಾಕ್ಷಾತ್ಕಾರವಿದೆ. ಇದರಲ್ಲಿ ಒಂದೆಡೆ ಕನ್ಯಾಪಿತೃವಿನ ಸಹಾಯಕ ಪರಿಸ್ಥಿತಿಯ ಮದುವೆ ಮಾಡಿಕೊಡುವಷ್ಟರಲ್ಲಿ ಆತ ಸೋತು ಸುಣ್ಣವಾಗಿರುತ್ತಾನೆ; ವರನು ಮುದುಕನಾದರೂ ಅಡ್ಡಿಯಿಲ್ಲ. ಆತ ಸ್ಥಿತಿವಂತನಾದರೆ ಸಾಕು, ಇಲ್ಲಿ ಹುಡುಗಿಯದ್ದೋ ಇತರರದ್ದೋ ಅಭಿಪ್ರಾಯಗಳನ್ನು ಕೇಳುವ ಪ್ರಮೇಯವೇ ಇಲ್ಲ. ಈ ಕಾದಂಬರಿಯು ಚಿತ್ರಿಸುವುದು ಅಂಥಾ ಒಂದು ಸಮಾಜವನ್ನು ಮತ್ತು ಆ ಕಾಲದ ರೀತಿ ರಿವಾಜುಗಳನ್ನು.

ಹವ್ಯಕ ಸಮಾಜದಲ್ಲೂ ಇದ್ದಂಥ ಬಾಲ ವಿವಾಹ ಪದ್ಧತಿಯ ದುರಂತಗಳನ್ನು ಚಿತ್ರಿಸಿದ 'ಇಗ್ಗಪ್ಪ ಹೆಗಡೇ ವಿವಾಹ ಪ್ರಹಸನ' (1887) ದಲ್ಲಿ ಸಮಸ್ಯೆಗೊಂದು ಸರಿಯಾದ ಹಾಗೂ ರಚನಾತ್ಮಕವಾದ ಪರಿಹಾರಗಳನ್ನು ಕಾಣಲಾಗುವುದಿಲ್ಲ. ಹೆಚ್ಚು ಕಡಿಮೆ ಇಂಥದೇ ವಸ್ತುವನ್ನು ಆಯ್ದು ರಚಿಸಲಾದ ಈ ಕಾದಂಬರಿಯೊಳಗೆ ಸಮಸ್ಯೆಯ ಪರಿಪೂರ್ಣ ಚಿತ್ರಣ, ಶಿಕ್ಷಣದ ಪ್ರಭಾವ, ಹೆಣ್ಣಾದರೂ ಸ್ವಂತ ಕರ್ತೃತ್ವ ಶಕ್ತಿ, ಧೀಶಕ್ತಿಗಳಿದ್ದರೆ ಏನನ್ನೂ ಸಾಧಿಸಬಹುದೆಂಬುದನ್ನು ಸಾಧಿಸಿ ತೋರಿಸಲಾಗಿದೆ. ಒಂದು ಉತ್ತಮ ಪ್ರಯತ್ನವಾದ ಈ ಕೃತಿಯಲ್ಲಿ ಸಂಭಾಷಣೆಗಳನ್ನು ಹವಿಗನ್ನಡದಲ್ಲಿ ಬರೆಯಲಾಗಿದ್ದು ಇದನ್ನು ಸಹಜವಾಗಿಯೂ ಸಮರ್ಥವಾಗಿಯೂ ತಂದಿದ್ದಾರೆ. ಇದುವೇ ಇನ್ನಷ್ಟು ವಿಸ್ತೃತವಾದ ಅಧ್ಯಯನವನ್ನು ಬಯಸುತ್ತದೆ. ಸನ್ಮಾನ್ಯ ಲೇಖಕಿಯವರಿಗೆ ಅಭಿನಂದನೆಗಳು.

## ಡಾ॥ ಸಬಿತಾ ಮರಕಿಣಿ : ಸಂಕ್ಷಿಪ್ತ ಪರಿಚಯ

ವೃತ್ತಿಯಿಂದ ವೈದ್ಯೆ, ಪ್ರವೃತ್ತಿಯಿಂದ ಸಮಾಜ ವಿಕಾಸ ಕಾರ್ಯನಿರ್ವಾಹಕಿ, ನಿವೃತ್ತಿಯಿಂದ ಹವಿಗನ್ನಡ ಬರಹಗಾರ್ತಿ.

ಅ. ಗ್ರಾಮೀಣ ಚಿಕಿತ್ಸಾಲಯಗಳು

* ದಕ್ಷಿಣ ಕನ್ನಡದ ವಿಟ್ಲದಲ್ಲಿ ಗ್ರಾಮೀಣ ಮಹಿಳೆಯರು ಮತ್ತು ಮಕ್ಕಳಿಗಾಗಿ ಸ್ವಂತ ಚಿಕಿತ್ಸಾಲಯ ನಿರ್ವಹಣೆ 1958–62

* ದಿ॥ ಪಂಡಿತ ತಾರಾನಾಥರು ಸ್ಥಾಪಿಸಿದ್ದ 'ಪ್ರೇಮ ಚಿಕಿತ್ಸಾಲಯ' ದ ಪುನಶ್ಚೇತನ – ಮಂತ್ರಾಲಯ ರೋಡ್ ರೈಲ್ವೆ ನಿಲ್ದಾಣದ ಬಳಿ ತುಂಗಭದ್ರಾದಲ್ಲಿ

* ಗುಲಬರ್ಗಾ ಜಿಲ್ಲೆಯ ಚಿತ್ತಾಪುರದಲ್ಲಿ ಸುಲಭ ವೆಚ್ಚದ ಒಳರೋಗಿಗಳ ವಾರ್ಡ್, ಹೆರಿಗೆಮನೆ ಸೌಕರ್ಯವಿದ್ದ ಮೈಸೂರು ದವಾಖಾನೆ ಪ್ರಾರಂಭಿಸಿ ನಡೆಸಿದ್ದು 1962–78

ಬ. ಸ್ವಯಂ ಸೇವಾ ಸಂಸ್ಥೆಗಳ ಮೂಲಕ

* 'ಅವೇರ್' ಸ್ವಯಂ ಸೇವಾ ಸಂಸ್ಥೆಯ ಮೂಲಕ ತೆಲಂಗಾಣದ 'ಪಡಕ್ಕಲ್' ನಲ್ಲಿ ಹರಿಜನ, ಗಿರಿಜನರಿಗೂ ಗುಡ್ಡಗಾಡು ನಿವಾಸಿಗಳೂ ಸುಲಭ ಚಿಕಿತ್ಸಾ ಸೌಲಭ್ಯ ಹಾಗೂ ಆರೋಗ್ಯ ರಕ್ಷಣೆಯ ಶಿಕ್ಷಣ : ಈ ಕಾರ್ಯಕ್ರಮಗಳು ನೆದರ್ಲಾಂಡ್ಸನ 'ನೋವಿಬ್' ಸಂಸ್ಥೆಯಿಂದ ಮೂರು

ಸಾಕ್ಷ್ಯಚಿತ್ರಗಳಲ್ಲಿ ಪ್ರಸಾರವಾಗಿವೆ. 'ಯೂನಿಸೆಫ್' ಸಂಸ್ಥೆ ಈ ಕಾರ್ಯಕ್ರಮಗಳ ಛಾಯಾಚಿತ್ರ ಪ್ರದರ್ಶನವನ್ನೂ ಮಾಡಿದೆ.

* ಗುಲಬರ್ಗಾ ಜಿಲ್ಲೆಯ ಕಮಲಾಪುರದಲ್ಲಿ ಜಲಾನಯನ ಪ್ರದೇಶಾಭಿವೃದ್ಧಿ ಯೋಜನೆಯಲ್ಲಿ (ಸ್ವಿಸ್ ಡೆವಲಪ್‌ಮೆಂಟ ಕೋ ಆಪರೇಶನ್ ಸಂಸ್ಥೆಯ ಸಹಯೋಗ) ಲಂಬಾಣಿ ತಾಂಡಾಗಳ ಸಮಗ್ರ ವಿಕಾಸಕ್ಕಾಗಿ ಮಹಿಳಾ ಸ್ವಸಹಾಯ ಸಂಘಗಳ ಸಂವರ್ಧನೆ.

* ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆಯಲ್ಲಿ ಕಾಡುಕುರುಬರು, ಜೇನು ಕುರುಬರು, ನಾಮಧಾರಿಗಳು, ಹರಿಜನರು ಮತ್ತು ಇತರ ಹಿಂದುಳಿದ ವರ್ಗಗಳ ಸಮಗ್ರ ವಿಕಾಸ ಕಾರ್ಯಕ್ರಮಗಳು; ಗ್ರಾಮ ಆರೋಗ್ಯನಿಧಿ ಸಂಚಾಲನೆ; ರೋಗನಿರೋಧಕ ಹಾಗೂ ಆರೋಗ್ಯವರ್ಧಕ ಪೌಷ್ಟಿಕ ಆಹಾರ ಕುರಿತು ಅನೌಪಚಾರಿಕ ಶಿಕ್ಷಣ; ಪರಿಸರ ಸಂರಕ್ಷಣ ಕಾರ್ಯಕ್ರಮ; ಗ್ರಾಮೀಣ ಪಾರಂಪರಿಕ ಸೂಲಗಿತ್ತಿಯರಿಗೆ ಪುನಶ್ಚೇತನ ತರಬೇತಿ – ತಾಲೂಕಿನ ಎಲ್ಲಾ 317 ಹಳ್ಳಿಗಳಲ್ಲಿ. (ಈ ಕಾರ್ಯಕ್ರಮಕ್ಕೆ ಅಮೇರಿಕಾದ 'ಪ್ಲಾನ್' ಸಂಸ್ಥೆಯಿಂದ ಪ್ರಶಂಸೆ ಮತ್ತು ಆರ್ಥಿಕ ನೆರವು, 'ಮೈರಾಡ' ಸ್ವಯಂ ಸೇವಾ ಸಂಸ್ಥೆಯ ಸಹಯೋಗ)

* ಬೆಂಗಳೂರಿನ 'ರಾಮಸುಧಾ ಟ್ರಸ್ಟ್' ಮೂಲಕ ಆನೇಕಲ್ ತಾಲೂಕಿನ ಮಧ್ಯಮವರ್ಗದ ಮಹಿಳೆಯರಿಗೆ ಗೃಹಾಲಂಕಾರ ಮತ್ತು ಕರಕುಶಲ ವಸ್ತು ತಯಾರಿಕೆ ಮೊದಲಾದ ಉಪಯುಕ್ತ ತರಬೇತಿ; ಗ್ರಾಮ ಪಂಚಾಯಿತಿ ಅಧ್ಯಕ್ಷೆ/ಉಪಾಧ್ಯಕ್ಷೆ/ ಸದಸ್ಯೆಯರಿಗೆ ವಿಶೇಷ ಪುನಶ್ಚೇತನ ಕಾರ್ಯಕ್ರಮ; ಅನೇಕ ಗ್ರಾಮಗಳಲ್ಲಿ ಭಾರತ ಸರಕಾರದ ಮಹಿಳಾ ಸಮೃದ್ಧಿ ಯೋಜನೆಗಳ ಅನುಷ್ಠಾನ, ಮಹಿಳೆಯರ ಸ್ವಸಹಾಯ ಸಂಘಗಳ ಮೂಲಕ ಉಳಿತಾಯ ಕಾರ್ಯಕ್ರಮ.

ಕ. ಸಾಮಾಜಿಕ ಸೇವಾ ಕ್ಷೇತ್ರದಲ್ಲಿ

* ಚಿತ್ತಾಪುರದಲ್ಲಿ ಶಿಶುವಿಹಾರ, ಪ್ರಾಥಮಿಕ ಶಾಲೆ ಸ್ಥಾಪನೆ – ಈಗ ಹೈಸ್ಕೂಲಾಗಿದೆ.

* ಅಂತಾರಾಷ್ಟ್ರೀಯ ಮಹಿಳಾ ವರ್ಷದಲ್ಲಿ ತಾಲೂಕು ಮಹಿಳಾ ಮಂಡಳದ ಅಧ್ಯಕ್ಷತೆ.

* ಚಿತ್ತಾಪುರ ನಗರಸಭೆಯ ಸದಸ್ಯೆ.

ಡ. ಸಾಹಿತ್ಯ ಕ್ಷೇತ್ರ:

* ವಿದ್ಯಾರ್ಥಿದೆಸೆಯಿಂದಲೂ ಬರವಣಿಗೆ, ಅಂದಿನ ಪ್ರಪಂಚ, ನವಚೇತನ, ವಿಚಾರವಾಣಿ ಮೊದಲಾದ ಪ್ರಸಿದ್ಧ ಪತ್ರಿಕೆಗಳಲ್ಲಿ ಅನೇಕ ಲೇಖನಗಳು ಪ್ರಕಟಗೊಂಡಿವೆ.
* ಹವಿಗನ್ನಡ ಸಾಹಿತ್ಯ ಕೃಷಿಯಲ್ಲಿ ವಿಶೇಷ ಸಾಧನೆ : ಹವಿಗನ್ನಡದ ಮೊದಲ ಕಾದಂಬರಿಕಾರ್ತಿ ಎಂಬ ಹೆಗ್ಗಳಿಕೆ.
* ಪ್ರಕಟಿತ ಕೃತಿಗಳು:

1. ಹೆಸರಿಡದ ಕವನ ಸಂಕಲನ – 1999ರಲ್ಲಿ
2. ಪಾಮಕ್ಕನ ಸಂಸಾರ – ಹವಿಗನ್ನಡ ಕಾದಂಬರಿ – 2004ರಲ್ಲಿ
3. ಮುಗಿಲು ಬಿರಿಯಿತು – ಹವಿಗನ್ನಡ ಕಾದಂಬರಿ – 2005ರಲ್ಲಿ
4. ಗೆದ್ದಳು ಕಾವೇರಿ – ಹವಿಗನ್ನಡ ಕಾದಂಬರಿ – 2007ರಲ್ಲಿ
5. ಮಾಂಗ್ಣಿ ಮಾಸ್ಟ್ರಂಗೆ ನಮಸ್ಕಾರ

– ಹವಿಗನ್ನಡ ಕಥಾ ಸಂಕಲನ 2008ರಲ್ಲಿ

ಡಾ॥ ಸಬಿತಾರ 'ಕಮಲಕ್ಕನ ಕಥೆ' ಯ ನಾಟಕ ರೂಪಾಂತರ 'ಹಳೇ ಮರಕ್ಕೆ ಹೊಸ ಚಿಗುರು' – ಶ್ರೀಮತಿ ಮನೋರಮಾ ಎಂ. ಭಟ್ಟರಿಂದ – 2008 ರಲ್ಲಿ

ಇ. ವೈಯಕ್ತಿಕ ಅಂಶಗಳು

* ಜನನ : ೧೯೩೩ಳ ಕಾಸರಗೋಡು ತಾಲೂಕಿನ ಕುಂಬಳೆ ಸಮೀಪದ ನಾರಾಯಣ ಮಂಗಲದಲ್ಲಿ.
* ತಂದೆ : ಹಿಳ್ಳೆಮನೆ ಮಹಾಲಿಂಗ ಭಟ್ (ಮುಖ್ಯೋಪಾಧ್ಯಾಯರು)
* ತಾಯಿ : ಶ್ರೀಮತಿ ಪರಮೇಶ್ವರಿ ಅಮ್ಮ
* ಪತಿ : ಡಾ॥ ಎಂ. ಬಿ. ಮರಕಿಣಿ
* ಮಗ : ನಾರಾಯಣಭಟ್ ಸೊಸೆ: ಗಾಯತ್ರಿ, ಮೊಮ್ಮಕ್ಕಳು: ಹಿಮ, ಆದಿತ್ಯ, ಮಗಳು : ಗೌರಿ (ಹಾವನೂರು)
* ಶಿಕ್ಷಣ : ಪ್ರಾರಂಭಿಕ : ನಾರಾಯಣ ಮಂಗಲ, ಎಡನೀರು, ಮಂಗಳೂರು ಸಂತ ಆಗ್ನೆಸ್ ಕಾಲೇಜು

ವೈದ್ಯಕೀಯ : ಎಲ್.ಎ.ಎಂ.ಎಸ್. – ಮೈಸೂರು , ಮಡಿಕೇರಿ ಮತ್ತು ಮಂಗಳೂರಿನಲ್ಲಿ

* ವಿಶ್ರಾಂತ ಜೀವನ : ನೆಲಮಂಗಲ ತಾಲೂಕಿನ ಅರಸಿನ ಕುಂಟೆ ಗ್ರಾಮದ ಆದರ್ಶನಗರದಲ್ಲಿ

ಪ್ರತಿಭಾ ಪುರಸ್ಕಾರ : ಹವಿಗನ್ನಡ ಪಿತಾಮಹ ಕರ್ಕಿ ಸೂರಿ ವೆಂಕಟರಮಣ ಶಾಸ್ತ್ರಿ ಸ್ಮರಣಾರ್ಥ ನೀಡಲಾಗುವ "ಹವಿಗನ್ನಡ ಸೂರಿ ಪ್ರಶಸ್ತಿ" - 2008ರಲ್ಲಿ

ಸಂಪರ್ಕ ವಿಳಾಸ: "ಮಾನಸ" 272/15, "ಆದರ್ಶ ನಗರ, ಅರಸಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು - 562 123

ಫೋನ್: 080-7725563, ಚರವಾಣಿ: 9845277977



ಮಾಂಗ್ಣಿ ಮಾಸ್ಟ್ರಂಗೆ ನಮಸ್ಕಾರ

ಕನ್ನಡದ ಸಣ್ಣಕಥಾಲೋಕಕ್ಕೆ ಮಹಿಳೆಯರ ಕೊಡುಗೆಯು ಸಣ್ಣದೇನಲ್ಲ. ವಸ್ತು, ನಿರೂಪಣೆ ಶೈಲಿ, ತಂತ್ರ, ಭಾಷಾಪ್ರಯೋಗಗಳ ದೃಷ್ಟಿಯಿಂದಲೂ ಕಾಣುವ ಪ್ರಯೋಗಶೀಲತೆಯು ಕಡಿಮೆಯೇನಲ್ಲ. ಮಗಿಳೆಯರ ಕಷ್ಟ ಸುಖಗಳು, ಅಹವಾಲು - ಅಮಸ್ಯೆಗಳು ಆಂತರಂಗಿಕ ನೋವು ನಲಿವುಗಳು ಬದುಕಿನ ಬೇರೆ ಬೇರೆ ಮಗ್ಗಲುಗಳ ಚಿತ್ರಣಗಳನ್ನಿತ್ತ ಅನೇಕ ಸಮರ್ಥತೆಗಳನ್ನು ನಾವು ನೋಡಿದ್ದೇವೆ.

ಸಾಂಸ್ಕೃತಿಕ ಹಾಗೂ ಭಾಷಿಕ ಪರ್ಯಾವರಣಗಳ ಹಿನ್ನಲೆಯಿಂದಲೂ ಮುಖ್ಯವೆನಿಸುವ ಡಾ॥ ಸಬಿತಾ ಮರಕಿಣಿಯವರ ಈ ಕಥಾಸಂಕಲನವು ಕನ್ನಡದ ಕಥೆಗಳ ಗುಚ್ಛದಲ್ಲಿ ಮಹತ್ವವನ್ನು ಪಡೆಯುತ್ತದೆ, ಮಾತ್ರವಲ್ಲ ಈ ಪ್ರಾದೇಶಿಕ ಹಿನ್ನಲೆಯಲ್ಲಿ ಒಬ್ಬ ಕಥೆಗಾರ್ತಿಯುಬರೆದು ಪ್ರಕಟಿಸಿದ ಮೊತ್ತಮೊದಲ ಕಥಾಸಂಕಲನವೆಂಬ ಹೆಗ್ಗಳಿಕೆಗೂ ಇದು ಪಾತ್ರವಾಗಿದೆ.

ಮೆಚ್ಚು ನುಡಿಯಿಂದ

ಪ್ರಕಾಶಕರು
ವಾಸವಿ ಪಬ್ಲಿಕೇಷನ್
ಬೆಂಗಳೂರು